ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ-569276



ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ 2019-20

# ವಿಷಯ: "ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ" (ಪ್ರಾತಿನಿಧಿಕ)

**ಸಂಶೋಧನಾ ವಿದ್ಯಾರ್ಥಿ**

ಕಾಂತರಾಜು. ಆರ್.
ನೋಂದಣಿ ಸಂಖ್ಯೆ: 182001030034

**ಮಾರ್ಗದರ್ಶಕರು**

ಡಾ. ಹೆಚ್. ಹನುಮಂತರಾಯಪ್ಪ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಕಲಾ ಕಾಲೇಜು
ಬೆಂಗಳೂರು

**ಮಾನ್ಯತಾ ಸಂಸ್ಥೆ**
ಕನ್ನಡ ಸಾಹಿತ್ಯ ಪರಿಷತ್ತು,
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-560018

ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ-569276




ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ನಿಬಂಧ 2019-20

# ವಿಷಯ: "ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ" (ಪ್ರಾತಿನಿಧಿಕ)

**ಸಂಶೋಧನಾ ವಿದ್ಯಾರ್ಥಿ**

ಕಾಂತರಾಜು. ಆರ್.
ನೋಂದಣಿ ಸಂಖ್ಯೆ: 182001030034

**ಮಾರ್ಗದರ್ಶಕರು**

ಡಾ. ಹೆಚ್. ಹನುಮಂತರಾಯಪ್ಪ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಕಲಾ ಕಾಲೇಜು
ಬೆಂಗಳೂರು

**ಮಾನ್ಯತಾ ಸಂಸ್ಥೆ**

ಕನ್ನಡ ಸಾಹಿತ್ಯ ಪರಿಷತ್ತು,
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-560018

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ **"ತ.ರಾ.ಸು ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ (ಪ್ರಾತಿನಿಧಿಕ)"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ಸಂಶೋಧನಾ ನಿಬಂಧವನ್ನು ಡಾ. ಹೆಚ್. ಹನುಮಂತರಾಯಪ್ಪ, ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಯಲದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

R. Kantha Raj

ದಿನಾಂಕ: 30-07-2019
ಸ್ಥಳ : ಬೆಂಗಳೂರು

**ಸಂಶೋಧಕರು**
**ಕಾಂತರಾಜು. ಆರ್**
**ಎಂ.ಫಿಲ್. ವಿದ್ಯಾರ್ಥಿ,**
**ಹಂಪಿ ಕನ್ನಡ ವಿಶ್ವವಿದ್ಯಾಲಯ,**
**ಬೆಂಗಳೂರು.**

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಕಾಂತರಾಜು. ಆರ್ ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ "ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ (ಪ್ರಾತಿನಿಧಿಕ)" ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು:
ಡಾ. ಹೆಚ್. ಹನುಮಂತರಾಯಪ್ಪ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಕಲಾ ಕಾಲೇಜು
ಬೆಂಗಳೂರು

Dr. H. Hanumantharayappa
M.A., Ph.D.
Associate Professor in Kannada
Govt. Arts College, Bengaluru-560 001.

ದಿನಾಂಕ: 30-07-2019
ಸ್ಥಳ : ಬೆಂಗಳೂರು

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಕಾಂತರಾಜು. ಆರ್ ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ "ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ (ಪ್ರಾತಿನಿಧಿಕ)" ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು:

Dr. H. Hanumantharayappa M.A., Ph.D.
Associate Professor in Kannada
Govt. Arts College, Bengaluru-560 001.

ಡಾ. ಹೆಚ್. ಹನುಮಂತರಾಯಪ್ಪ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಕಲಾ ಕಾಲೇಜು
ಬೆಂಗಳೂರು

ದಿನಾಂಕ: 30-07-2019
ಸ್ಥಳ : ಬೆಂಗಳೂರು

# ಕೃತಜ್ಞತೆಗಳು

ನನ್ನ ವಿಷಯಕ್ಕೆ ಆತ್ಮೀಯವಾಗಿ ಸ್ಪಂದಿಸಿ ಅತ್ಯುತ್ತಮವಾದ ಮಾರ್ಗದರ್ಶನ ಮಾಡಿ ಸೂಕ್ತ ಸಲಹೆಗಳನ್ನು ನೀಡಿ ಜೊತೆಗೆ **"ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ"** ಎಂಬ ವಿಷಯವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಗೆ ಆಯ್ಕೆ ಮಾಡಿಕೊಳ್ಳುವಂತೆ ಮಾಡಿ, ಉತ್ತಮ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರಾದಂತಹ ಡಾ॥ ಎಚ್. ಹನುಮಂತರಾಯಪ್ಪ, ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು ಇವರಿಗೆ ತುಂಬು ಹೃದಯದ ಕೃತಜ್ಞತೆಗಳು ಮತ್ತು ನನ್ನ ಅನಂತ ಅನಂತ ವಂದನೆಗಳು.

ಅಧಿಕೃತವಾಗಿ ಮಾರ್ಗದರ್ಶಕರಲ್ಲದಿದ್ದರೂ ಅಧ್ಯಯನಕ್ಕೆ ಸಂಬಂಧಿಸಿದ ಹಾಗೂ ಈ ಅಧ್ಯಯನಕ್ಕೆ ಒಳಪಡುವಂತೆ ಆಕರ ಗ್ರಂಥಗಳನ್ನು ನೀಡಿದ ತ.ರಾ.ಸು. ರವರಿಗೆ ಎಂದೆಂದಿಗೂ ನಾನು ಚಿರಋಣಿಯಾಗಿದ್ದೇನೆ.

ಸದಾ ನನ್ನ ಏಳ್ಗೆಯನ್ನೇ ಬಯಸುತ್ತಿರುವ ತಾಯಿ ಪಾರ್ವತಮ್ಮ, ತಂದೆ ರಾಮು.ಎಂ., ನನ್ನ ಪ್ರೀತಿಯ ತಂಗಿಯಾದ ಕಮಲ ಮತ್ತು ಭಾವನವರಾದ ಕಿರಣ್‌ಕುಮಾರ್‌ರವರಿಗೂ,

ಸದಾ ನನಗೆ ಒಳಿತನ್ನೇ ಬಯಸುವ ಮತ್ತು ನನ್ನ ಅಧ್ಯಯನದಲ್ಲಿ ಸಹಕಾರಿಯಾಗಿರುವ ಆತ್ಮೀಯ ಗೆಳೆಯ ಮಹೇಶ್. ಬಿ. ಕೆ. ಇವರಿಗೂ ನನ್ನ ಕೃತಜ್ಞತೆಗಳು.

ಅಧ್ಯಯನದ ಸಂದರ್ಭದಲ್ಲಿ ಸಹಾಯ ಮಾಡಿದ ಸಹಪಾಠಿಗಳಾದ ಸುರೇಶ್ ಹೊಸಮನಿ, ಕಿರಣ್‌ಕುಮಾರ್, ಶಶಿರೇಖಾ, ಪುಷ್ಪ, ಲಕ್ಷ್ಮಿ ಇವರಿಗೂ, ನನ್ನ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನಿತಾ ದಂಡಿನ್‌ರವರಿಗೂ ಮತ್ತು ನನ್ನ ಸಹೋದ್ಯೋಗಿ ಮಿತ್ರರೆಲ್ಲರಿಗೂ ನನ್ನ ಕೃತಜ್ಞತೆಗಳು.

ಈ ನಿಬಂಧ ಅಂದವಾಗಿ ಅಕ್ಷರ ರೂಪದಲ್ಲಿ ಹೊರಬರಲು ಕಾರಣರಾದ ಶಿವಾನಂದ ಎಸ್. ಬಡಿಗೇರ ರವರಿಗೂ ನನ್ನ ಕೃತಜ್ಞತೆಗಳು.

ದಿನಾಂಕ:

ಸ್ಥಳ : ಬೆಂಗಳೂರು

ಶ್ರೀ ಕಾಂತರಾಜು ಆರ್

## "ತ.ರಾ.ಸು. ರವರ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆ (ಪ್ರಾತಿನಿಧಿಕ)"

### ಪರಿವಿಡಿ

# ಅಧ್ಯಾಯ–1

## ಉದ್ದೇಶ–ವ್ಯಾಪ್ತಿ–ಸ್ವರೂಪ

ಮಾನವ ಸಂಘ ಜೀವಿಯಾಗಿದ್ದು ಒಂಟಿಯಾಗಿ ಬದುಕಲಾರ ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಹಾಗೆಯೇ ತನಗೆ ಮನರಂಜನೆಯ ಅವಶ್ಯಕತೆ ಇದ್ದಿದ್ದರಿಂದ ತನ್ನ ಬದುಕಿನ ಬವಣೆಗಳನ್ನ ಹಾಡು, ಕಥೆಗಳಾಗಿ ಹೇಳಲು ಆರಂಭಿಸಿದನು. ಮುಂದೆ ಸಾಹಿತ್ಯವು ಉನ್ನತ ಮಟ್ಟದಲ್ಲಿ ಸವಿಸ್ತಾರವಾಗಿ ತನ್ನ ಎಲ್ಲೆಗಳನ್ನು ಚಾಚುತ್ತಾ ಹೋದಂತೆ ತನ್ನೊಡಲಲ್ಲಿ ಹಲವು ವಿಧದ ಸಾಹಿತ್ಯ ಪ್ರಕಾರಗಳನ್ನು ಮೈಗೂಡಿಸಿಕೊಂಡು ಸಾಗಿತು.

ಸಾಹಿತ್ಯವು ಮನುಷ್ಯನಿಗೆ ಅತ್ಯವಶ್ಯಕವಾಗಿ ಬೇಕಾದ ಸಂಪನ್ಮೂಲವಾಗಿದೆ. ಸಾಹಿತ್ಯದ ಮೂಲಕ ಮನುಷ್ಯ ಜೀವನದ ಹಲವು ಮಜಲುಗಳನ್ನು ಅರಿಯಲು ಸಾಧ್ಯವಾಯಿತು. ಅವುಗಳೆಂದರೆ ಕಾವ್ಯ, ಮಹಾಕಾವ್ಯ, ನಾಟಕ, ವಿಮರ್ಶೆ, ಸಣ್ಣಕತೆ, ಕಾದಂಬರಿ ಮುಂತಾದ ಹಲವು ಪ್ರಕಾರಗಳು ತಮ್ಮದೇ ಹಾದಿಯಲ್ಲಿ ಬೆಳವಣಿಗೆಯಾಗುತ್ತ ಸಾಗಿದವು.

ಮೇಲಿನ ಎಲ್ಲಾ ಸಾಹಿತ್ಯ ಪ್ರಕಾರಗಳಿಗಿಂತ ಕಾದಂಬರಿ ಪ್ರಕಾರವು ವಿಭಿನ್ನ, ವಿನೂತನವಾದುದು. ಕಾರಣ, ಓದುಗನಿಗೆ ಹೊಸ ಅನುಭವವನ್ನು ದೀರ್ಘ ಮಂಥನದ ಮೂಲಕ ಪಡೆಯುವ ಅವಕಾಶ ಇಲ್ಲಿದೆ. ಹಾಗಾಗಿ ಕಾದಂಬರಿಯನ್ನು ಓದುವ ಓದುಗನು ತನ್ನೊಳಗೆ ಜೀವನದ ಹಲವು ಅನುಭವಗಳನ್ನು ಪಡೆಯುತ್ತಾನೆ.

ಕಾದಂಬರಿ ಪ್ರಕಾರವು 19ನೇ ಶತಮಾನದ ಮಧ್ಯಭಾಗದಿಂದ ಹೆಚ್ಚು ಪ್ರಚಾರಕ್ಕೆ ಬಂದು ಅಧಿಕವಾಗಿ ಓದುಗರನ್ನು ಸೆಳೆಯಲು ಆರಂಭವಾಗಿದ್ದು ಈಗ ಇತಿಹಾಸ, ಭಾರತದ ಹಲವು ಭಾಷೆಗಳಲ್ಲಿ ಕಾದಂಬರಿ ಪ್ರಕಾರವು ಹೆಚ್ಚು ಪ್ರಸಿದ್ಧಿಯನ್ನು ಪಡೆಯುತ್ತಾ ಸಾಗಿದಂತೆ ತನ್ನೊಳಗೆ ಓದುಗ ವರ್ಗವನ್ನು ಹೆಚ್ಚಿಸಿಕೊಳ್ಳುತ್ತಾ ಸಾಗಿತು.

1940ರ ನಂತರ ಕನ್ನಡ ಸಾಹಿತ್ಯವು ಒಂದು ಹೊಸ ಮಗ್ಗುಲಿಗೆ ವಾಲಿತು. ಈ ಮೂಲಕ ಸಾಮಾಜಿಕವಾಗಿ ಇರುವ ಹಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಸಾಹಿತ್ಯವು ಮಧ್ಯಮ ವರ್ಗದಲ್ಲಿನ ಓದುಗರನ್ನು ಹೆಚ್ಚಿನ ಮಟ್ಟದಲ್ಲಿ ಸೆಳೆಯುವ ಕೆಲಸವನ್ನು ಮಾಡುವ ಮೂಲಕ ಹೊಸ ಸಾಹಿತ್ಯ ಸೃಷ್ಟಿಗೆ ನಾಂದಿ ಹಾಡಿತು. ಈ ಮೂಲಕ ಕಾದಂಬರಿ ಪ್ರಕಾರವು ಅತ್ಯುನ್ನತ ಮಟ್ಟದಲ್ಲಿ ಮೂಡಿ ಸಾಮಾಜಿಕ ಸಮಸ್ಯೆಗಳ ದೈನಂದಿನ ಬದುಕಿನ ಹಲವು ವಿಚಾರಗಳನ್ನು ನೇರಾನೇರ ಕಾದಂಬರಿಗಳಲ್ಲಿ ಹೇಳುವ ಪರಿಪಾಠ ಆರಂಭವಾಯಿತು. ಈ ಕಾದಂಬರಿಗಳಲ್ಲಿನ ಪಾತ್ರಗಳು ಸಹ ಮಧ್ಯಮ ವರ್ಗದ ಹಲವು ವಿಷಯಗಳನ್ನು ಪ್ರತಿಬಿಂಬಿಸುವ ಕೆಲಸವನ್ನು ಮಾಡತೊಡಗಿತು.

1940ರ ನಂತರ ಕನ್ನಡದಲ್ಲಿ ಆರಂಭವಾದ ಹೊಸ ಸಾಹಿತ್ಯ ಪ್ರಕಾರವೇ ಪ್ರಗತಿಶೀಲ. ಈ ಸಾಹಿತ್ಯದಲ್ಲಿ ಮಧ್ಯಮ ವರ್ಗದ ಬದುಕಿನ ಬವಣೆಗಳನ್ನೇ ಕೇಂದ್ರವಾಗಿಟ್ಟು ಪಾತ್ರ ಸೃಷ್ಟಿ ಆಗುತ್ತಿತ್ತು. ಬಡತನ, ನಿರುದ್ಯೋಗ, ಅನಕ್ಷರತೆ, ಹಸಿವು, ಮೂಢನಂಬಿಕೆಗಳು, ವೇಶ್ಯಾವಾಟಿಕೆ ಮುಂತಾದ ಹಲವು ಸಾಮಾಜಿಕ ಸಮಸ್ಯೆಗಳೇ ಈ ಸಾಹಿತ್ಯ ಪ್ರಕಾರದಲ್ಲಿ ಹೆಚ್ಚು ಪ್ರಾಧಾನ್ಯತೆ ಪಡೆದುಕೊಂಡಿತು. ಆದ್ದರಿಂದ ಪ್ರಗತಿಶೀಲ ಸಾಹಿತ್ಯವು ಆರಂಭ ಕಾಲಘಟ್ಟದಲ್ಲಿ ಹೆಚ್ಚು ಜನರನ್ನು ಆಕರ್ಷಿಸಿ ಓದುಗರ ಸಂಖ್ಯೆಯನ್ನು ಅಧಿಕವಾಗಿಸಿಕೊಂಡಿತು.

ಪ್ರಗತಿಶೀಲ ಸಾಹಿತ್ಯದಲ್ಲಿ ತಮ್ಮ ಸಾಹಿತ್ಯ ಕೃಷಿಯನ್ನು ಮಾಡಿದವರಲ್ಲಿ ಪ್ರಮುಖ ಸಾಹಿತಿಗಳೆಂದರೆ ಅ. ನ. ಕೃಷ್ಣರಾಯರು, ತ.ರಾ. ಸುಬ್ಬರಾವ್, ಬಸವರಾಜ ಕಟ್ಟಿಮನಿ, ನಿರಂಜನ, ಚದುರಂಗ, ಆನಂದ ಮುಂತಾದವರು. ಈ ಎಲ್ಲಾ ಸಾಹಿತಿಗಳು ತಮ್ಮ ಸಾಹಿತ್ಯ ರಚನೆಗೆ ಕಾದಂಬರಿ ಮತ್ತು ಕಥೆಗಳನ್ನು ಬಳಸಿಕೊಂಡರು. ಅದರಲ್ಲೂ ಸಣ್ಣಕತೆಗಳ ಮೂಲಕವು ಪ್ರಗತಿಶೀಲ ಸಾಹಿತ್ಯದ ಮುಂದುವರಿಕೆ ಸಾಧ್ಯವಾಯಿತು.

ಪ್ರಗತಿಶೀಲ ಸಾಹಿತ್ಯದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿದ್ದು ಕಾದಂಬರಿ ಪ್ರಕಾರವಾಗಿದೆ. ಈ ಕಾದಂಬರಿಗಳ ಮೂಲಕ ಭಾರತದ ಮಧ್ಯಮ ವರ್ಗದ ಹಲವು ಸಾಮಾಜಿಕ ಪಿಡುಗುಗಳನ್ನು ತೆರೆದಿಡುವ ಕೆಲಸ ಆರಂಭವಾಯಿತು. ಈ ಹಿಂದಿನ ಸಾಹಿತ್ಯ ಪ್ರಕಾರಗಳು ಬರೀ ವರ್ಣನೆಗಳಲ್ಲಿ ತೊಡಗಿದ್ದವೇ ಹೊರತು ಮಧ್ಯಮ ವರ್ಗದ ನೈಜಸ್ಥಿತಿಯನ್ನು ತಮ್ಮ ಸಾಹಿತ್ಯದಲ್ಲಿ ಹೇಳುವ ಪ್ರಯತ್ನವನ್ನು ಮಾಡಲೇ ಇಲ್ಲ. ಆದರೆ ಪ್ರಗತಿಶೀಲ ಸಾಹಿತ್ಯದಲ್ಲಿ ಈ ಎಲ್ಲಾ ಸಮಸ್ಯೆಗಳನ್ನು ತೆರೆದಿಡುವ ಪ್ರಯತ್ನ ನಡೆಯಿತು. ಈ ಸಾಹಿತ್ಯದ ಸಾಧಕ–ಬಾಧಕಗಳು ಏನೇ ಆದರೂ ಒಂದು ಹೊಸ ಸಾಹಿತ್ಯ ಸೃಷ್ಟಿಯ ಮೂಲಕ ಸಮಾಜವನ್ನು ಎಚ್ಚರಿಸುವ ಕೆಲಸವಂತೂ ನಡೆಯಿತು.

ಹೀಗೆ ಪ್ರಗತಿಶೀಲ ಪ್ರಕಾರದಲ್ಲಿ ವಿಭಿನ್ನ ಕಾದಂಬರಿಕಾರರಾಗಿ ಗುರುತಿಸಿಕೊಂಡವರು ತ.ರಾ.ಸು.ರವರು. ಇವರ ಕಾದಂಬರಿಗಳ ಪಾತ್ರಗಳು ವಾಸ್ತವತೆಗೆ ಹತ್ತಿರವಾಗಿರುತ್ತಿದ್ದವು. ಆದ್ದರಿಂದಲೇ ಪ್ರಮುಖವಾಗಿ ತ.ರಾ.ಸು. ಅವರ ಕಾದಂಬರಿಗಳಲ್ಲಿನ ಕೌಟುಂಬಿಕ ಜೀವನ, ಅಲ್ಲಿನ ಸ್ತ್ರೀ ಪಾತ್ರಗಳು, ಪುರುಷ ಯಜಮಾನಿಕೆ, ಬಡತನ, ನಿರುದ್ಯೋಗ ಸಮಸ್ಯೆ ಹೀಗೆ ಹತ್ತು ಹಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಬರವಣಿಗೆಯು ತ.ರಾ.ಸು ಅವರ ಹಲವು ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ತ.ರಾ.ಸು ಅವರ ಯಾವುದೇ ಕಾದಂಬರಿಯ ವಿಷಯವು ಯಾವುದೇ ಆಡಂಬರವಿಲ್ಲದೇ, ಇರುವ ವಿಷಯವನ್ನು ನೇರವಾಗಿ ಹೇಳುತ್ತಾ ಸಂಸ್ಕೃತಿ, ಸಂಪ್ರದಾಯ, ಮಡಿವಂತಿಕೆಯಿರುವ ಸಮಾಜದಲ್ಲಿ

ನಡೆಯುವ ಹಲವು ಅಕ್ರಮ ಚಟುವಟಿಕೆ, ಕ್ರೌರ್ಯ, ನೋವನ್ನು ತುಂಬಿದ ಹಲವು ಪಾತ್ರಗಳ ಮೂಲಕ ಕಾದಂಬರಿಯ ಜೀವಂತಿಕೆಯನ್ನು ಉಳಿಸಿಕೊಂಡು ಓದುಗರನ್ನು ವಿವೇಚನೆಗೆ ತಳ್ಳುತ್ತದೆ.

ತ.ರಾ.ಸು. ರವರು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಮಧ್ಯಮ ವರ್ಗದ ಬದುಕಿನ ಬವಣೆಗಳನ್ನು ಕೇಂದ್ರವಾಗಿಟ್ಟುಕೊಂಡು ತಮ್ಮ ಕಾದಂಬರಿಗಳನ್ನು ರಚನೆ ಮಾಡಿರುವುದು ಸ್ವಾಗತಾರ್ಹ.

ತ.ರಾ.ಸು. ಅವರು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಬರುವ 'ಗಂಡು' ಪಾತ್ರವನ್ನು ನಿರ್ದಿಷ್ಟವಾಗಿ ರೂಪಿಸಿ ಯಾವುದೇ ರೀತಿಯಲ್ಲೂ ವೈಭವಿಕರಿಸಿ ಚಿತ್ರಿಸದೇ ಹೋದರೂ ಹೆಣ್ಣಿನ ಮೇಲೆ ತನ್ನ ನಿಯಂತ್ರಣ ಸಾಧಿಸುವ ಪಾತ್ರಗಳಾಗಿ ಚಿತ್ರಿಸಲ್ಪಟ್ಟಿದೆ. ಇಲ್ಲಿನ ಗಂಡು ಪಾತ್ರಗಳು ಮನೆಯನ್ನು ಅರ್ಥಿಕವಾಗಿ ನಿರ್ವಹಿಸುವ, ಕೆಲವೊಮ್ಮೆ ಆರ್ಥಿಕವಾಗಿ ದುರ್ಬಲವಾಗಿದ್ದರೂ ಯಜಮಾನಿಕೆಯನ್ನು ಪಡೆದುಕೊಳ್ಳುವ, ಕೆಲವೊಮ್ಮೆ ತನ್ನ ಸಾಧಕ-ಬಾಧಕಗಳಿಗೆ ಅನುಗುಣವಾಗಿ ಯಜಮಾನಿಕೆಯನ್ನು ಪ್ರದರ್ಶಿಸುವಂತಹ ಪಾತ್ರಗಳು ತ.ರಾ.ಸು. ಕಾದಂಬರಿಗಳಲ್ಲಿ ನಿರ್ಮಾಣಗೊಂಡಿದೆ.

ಭಾರತದ ಸಾಮಾಜಿಕ ಸ್ತರವೇ ಕುಟುಂಬ ಜೀವನದ ಮೇಲೆ ನಿಂತಿದೆ. ಹೀಗಿರುವಾಗ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠವೆನ್ನುವ ಭಾರತೀಯ ಸಾಮಾಜಿಕ ಧೋರಣೆಯನ್ನು ತ.ರಾ.ಸು. ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿನ ಪಾತ್ರಗಳ ಮೂಲಕ ಪುರುಷ ದಬ್ಬಾಳಿಕೆಯನ್ನು ವಿರೋಧಿಸಿ ಸ್ತ್ರೀವಾದಿ ಧೋರಣೆಯನ್ನು ತಳೆಯುವ ಬಗ್ಗೆ ಪುರುಷರಿಗೆ ಎಚ್ಚರಿಕೆಯನ್ನು ಕೊಡುವ ಉದ್ದೇಶ ಹೊಂದಿವೆ.

ಹೆಣ್ಣು ಅಬಲೆ, ಆಕೆಗೆ ಗಂಡೊಬ್ಬನ ಆಸರೆ ಇರಲೇಬೇಕೆನ್ನುವ ಧೋರಣೆ, ಮಡಿವಂತಿಕೆ, ಸಂಸ್ಕೃತಿ, ಸಂಪ್ರದಾಯದ ಸೋಗಿನಲ್ಲಿ ಹೆಣ್ಣಿನ ಹಲವು ಆಶೋತ್ತರಗಳನ್ನು ಗಾಳಿಗೆ ತೂರಿರುವ ಅಂಶಗಳನ್ನು ತ.ರಾ.ಸು. ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಹೇಳಿದ್ದಾರೆ. ಕುಟುಂಬ ನಿರ್ವಹಣೆಯನ್ನು ಹೆಣ್ಣಿನ ತಲೆಗೆ ಕಟ್ಟಿ ಆಕೆಯ ವೈವಾಹಿಕ ಜೀವನವು ಹದಗೆಡುವಂತೆ ಮಾಡಿದನ್ನು ತೋರಿಸಿದ್ದಾರೆ.

ಮಧ್ಯಮ ವರ್ಗದ ಪುರುಷನ ಮತ್ತೊಂದು ವಿಚಾರವೆಂದರೆ ಗಂಡು ಮಗುವಿನ ಬಗೆಗೆ ವ್ಯಾಮೋಹ ಇರುವುದು. ಅದಕ್ಕಾಗಿ ಹೆಣ್ಣು ಮಗುವನ್ನು ನಿಕೃಷ್ಟವಾಗಿ ಕಾಣುತ್ತಾ, ಬರೀ ಗಂಡು ಮಗುವಿನ ಮೋಹಕ್ಕೆ, ವಂಶೋದ್ಧಾರಕನೆಂಬ ಮಡಿವಂತಿಕೆಯನ್ನು ಸಾಂಪ್ರದಾಯಿಕವಾಗಿ ಹೇಳುತ್ತಾ ಇರುವ ಬಡತನದ ಬೇಗೆಯನ್ನು ಮತ್ತಷ್ಟು ವಿಸ್ತರಿಸಿಕೊಳ್ಳುತ್ತಾ, ಒಂದು ವೇಳೆ ಹೆಣ್ಣು ಗಂಡು ಮಗುವಿಗೆ ಜನ್ಮ ನೀಡದಿದ್ದಾಗ ಅದಕ್ಕೆ ಮತ್ತೆ ಹೆಣ್ಣನ್ನು ಶಪಿಸುತ್ತಾ ತನ್ನದು ಏನೂ ತಪ್ಪಿಲ್ಲದಂತೆ ವರ್ತಿಸುವುದು ಭಾರತೀಯ ಪುರುಷ ಪ್ರಧಾನ ವ್ಯವಸ್ಥೆಗೆ ಹಿಡಿದ ಕೈಗನ್ನಡಿ.

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕಂಡು ಬರುವ ಬಹುಮುಖ್ಯವಾದ ಮತ್ತೊಂದು ಅಂಶವೆಂದರೆ ಅದು ಸಾಂಸಾರಿಕ ಜೀವನ. ಭಾರತದಂತಹ ರಾಷ್ಟ್ರದಲ್ಲಿ ಕೌಟುಂಬಿಕ ಜೀವನಕ್ಕೆ ಹೆಚ್ಚು ಮಹತ್ವವಿದ್ದು, ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ತುಂಬಾ ಚೆನ್ನಾಗಿ ಮಿಳಿತಗೊಂಡಿದೆ. ಕೋಟ್ಯಾನುಕೋಟಿ ಸಂಖ್ಯೆಯಲ್ಲಿರುವ ಈ ಸಂಸಾರಗಳು, ಸುತ್ತ ಚಲಿಸುತ್ತಿರುವ ವಿಶ್ವದ ಯಾವ ವಿದ್ಯಮಾನಗಳ ಅರಿವೂ ಇಲ್ಲದೆ, ಆ ಘಟನೆಗಳಿಂದ ಅಷ್ಟಾಗಿ ಪ್ರಭಾವಿತವಾಗದೆ, ಆ ಘಟನೆಗಳಿಗೆ ತಾವೊಂದು ಕಾರಣವಾಗದೇ ಹೇಗೋ ಹುಟ್ಟಿ, ಎಲ್ಲೋ ಅರಳಿ, ಎಂತೋ ಬಾಡಿಹೋಗುವ ವನಸುಮಗಳ ಹಾಗೆ ಬೆಳೆದು ಬಾಳಿ ಆಗಿಹೋಗುತ್ತದೆ. ಇಂಥ ಸೂಕ್ಷ್ಮ ವಿಚಾರಗಳನ್ನು ತ.ರಾ.ಸು. ತುಂಬಾ ಚೆನ್ನಾಗಿ ಅರ್ಥ ಮಾಡಿಕೊಂಡು ತಮ್ಮ ಕಾದಂಬರಿಗಳಲ್ಲಿ ಅಳವಡಿಸಿದ್ದರಿಂದಲೇ ಬಹುಶಃ ಅವರ ಸಾಮಾಜಿಕ ಕಾದಂಬರಿಗಳು ಅವರ ಐತಿಹಾಸಿಕ ಕಾದಂಬರಿಗಳಷ್ಟೇ ಪ್ರಸಿದ್ಧಿಯನ್ನು ಪಡೆದುಕೊಂಡವು.

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕಂಡು ಬರುವ ಮತ್ತೊಂದು ವಿಷಯವೆಂದರೆ ಬಡತನ. ಭಾರತದ ಮಧ್ಯಮ ವರ್ಗವನ್ನೇ ಆಧಾರವಾಗಿಟ್ಟುಕೊಂಡು ತಮ್ಮ ಕಾದಂಬರಿಗಳನು ರಚನೆ ಮಾಡುವಾಗ ಬಡತನದ ಕರಾಳಛಾಯೆಯನ್ನು ಅದ್ಭುತವಾಗಿ ವಿವರಿಸಿದ್ದಾರೆ. ಕುಟುಂಬ ನಿರ್ವಹಣೆಯ ಹೊಣೆ ಹೊತ್ತ ಮಧ್ಯಮ ವರ್ಗದಲ್ಲಿರುವ ಮನೆಯ ಯಜಮಾನನು ತನ್ನ ತುಂಬು ಕುಟುಂಬವನ್ನು ಸಾಕುವುದೇ ಬಹುದೊಡ್ಡ ಸವಾಲಾಗಿದ್ದು, ಬಡತನವು ಎಲ್ಲಾ ಕಡೆಯಿಂದ ಆವರಿಸಿಕೊಂಡಿರುತ್ತದೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾದಂಬರಿಯು ಬಹು ಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ. ಅದರಲ್ಲೂ ಸಾಮಾಜಿಕ ಕಾದಂಬರಿಗಳು ತನ್ನದೇ ಆದ ನೆಲೆಗಟ್ಟಿನಲ್ಲಿ ರಚಿತವಾಗುತ್ತದೆ. ಸಾಮಾಜಿಕ ಕಾದಂಬರಿಗಳು ಸಮಾಜದಲ್ಲಿ ನಡೆದ, ನಡೆಯುತ್ತಿರುವ, ಮುಂದೆ ಆಗಬಹುದಾದ ಹಲವು ವಿಷಯಗಳನ್ನು ಪ್ರಾತಿನಿಧಿಕವಾಗಿ ಇಟ್ಟುಕೊಂಡು ಹಲವು ಪಾತ್ರಗಳ ಮೂಲಕ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯ ಯಶಸ್ವಿಯಾಗಿ ನಡೆಯುತ್ತದೆ.

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿನ ಪಾತ್ರಗಳು ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವ ಪಾತ್ರವನ್ನು ನಿರ್ವಹಿಸುತ್ತಿವೆ. ಒಂದು ವೇಳೆ ಇವತ್ತಿನ ಕಾಲಘಟ್ಟಕ್ಕೆ ಬದಲಾಗಿದೆಯೇ? ಅಧಿಕಾರಿಶಾಹಿ ವರ್ಗ ಅಥವಾ ಆಳುವ ವರ್ಗ ಸಮಾಜದ ಕೆಳವರ್ಗವನ್ನು ಹೇಗೆ ಬಳಸಿಕೊಳ್ಳುತ್ತಿವೆ ಎಂಬುದನ್ನು ಈ ಕಾದಂಬರಿಗಳ ಮೂಲಕ ಅರಿಯುವ ಉದ್ದೇಶ. ಅದು ಸಾಮಾಜಿಕ ಸಂರಚನೆಯಲ್ಲಿ ಹೇಗೆ ಬಳಕೆಯಾಗಿದೆ ಎಂಬುದನ್ನು ತಿಳಿಯುವ ಉದ್ದೇಶವಿದೆ.

ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ಭಾರತೀಯ ಮಧ್ಯಮ ವರ್ಗವನ್ನು ಪ್ರತಿನಿಧಿಸುತ್ತಿದ್ದು, ಆ ಮೂಲಕ ಆ ಸಮಸ್ಯೆಗಳಿಗೆ ಒಂದು ಸಾಮಾಜಿಕ ನ್ಯಾಯ ಕೊಡಿಸುವ

ಕೆಲಸವಾಗಿದೆಯೇ? ಆಯಾ ಕಾಲಘಟ್ಟಕ್ಕೆ ಓದುಗರ ಅಭಿರುಚಿಗೆ ತಕ್ಕಂತೆ ವಿವಿಧ ಪಾತ್ರಗಳ ಮೂಲಕ ಭಾರತೀಯ ಸಾಮಾನ್ಯ ವರ್ಗದ ಕೌಟುಂಬಿಕ ವ್ಯವಸ್ಥೆಯನ್ನು ಕಟ್ಟಿಕೊಡುತ್ತಿದ್ದ ರೀತಿ ಅತ್ಯದ್ಭುತವಾಗಿದ್ದು, ಈ ಮೂಲಕ ತ.ರಾ.ಸು. ರವರ ಕಾದಂಬರಿಗಳಲ್ಲಿರುವ ಪಾತ್ರಗಳು ಮತ್ತು ಅವುಗಳ ಸಾಮಾಜಿಕ ಹಿನ್ನೆಲೆಯನ್ನು ಅರಿತುಕೊಳ್ಳುವ ಉದ್ದೇಶವಿದೆ.

ಪ್ರಗತಿಶೀಲ ಸಾಹಿತ್ಯದ ಹಲವು ಕಾದಂಬರಿಕಾರರನ್ನು ತ.ರಾ.ಸು.ರವರ ಜೊತೆ ಹೋಲಿಸಿದರೆ ಇವರ ಕಾದಂಬರಿಗಳಲ್ಲಿನ ಪಾತ್ರಗಳು ನೈಜ ಬದುಕಿಗೆ ಹತ್ತಿರವಿರುವ ಸಂಗತಿಗಳೇ ಇರುತ್ತಿದ್ದವು. ಮಧ್ಯಮ ವರ್ಗದ ಹಲವು ಸಂಗತಿಗಳನ್ನು ನಿಸ್ಸಂಕೋಚವಾಗಿ ಓದುಗರ ಮನಮುಟ್ಟುವಂತೆ ಹೇಳಿದ್ದಾರೆ. ಹೀಗಾಗಿ ತ.ರಾ.ಸು ರವರ ಕಾದಂಬರಿಗಳು ಇವತ್ತಿನ ಸಾಮಾಜಿಕ ವ್ಯವಸ್ಥೆಗೆ ಪ್ರಸ್ತುತವಾಗಿದೆಯೇ? ಅಥವಾ ಭಿನ್ನವಾಗಿದೆಯೇ? ಹಾಗಿದ್ದರೆ ಪ್ರಗತಿಶೀಲ ಸಾಹಿತ್ಯ ಕಾಲಕ್ಕೂ ಇಂದಿನ ಕಾಲಕ್ಕೂ ಆಗಿರುವ ಸಾಮಾಜಿಕ ವ್ಯತ್ಯಾಸಗಳೇನು? ಹಾಗಿದ್ದರೆ ಆ ಸಾಮಾಜಿಕ ವ್ಯತ್ಯಾಸಗಳು ಬೆಳೆಯುತ್ತಿರುವ ಸಮಾಜಕ್ಕೆ ಸಕಾರಾತ್ಮಕವಾಗಿ ಸ್ಪಂದಿಸಿವೆಯೇ? ಅಥವಾ ನಕಾರಾತ್ಮಕ ಪರಿಣಾಮವನ್ನು ಬೀರುತ್ತಿವೆಯೇ ಎಂಬುದನ್ನು ಕೂಲಂಕುಶವಾಗಿ ಪರಿಶೀಲಿಸುವ ನಂತರ ಸಾಹಿತ್ಯವೆನ್ನುವುದು ಕಾಲಕಾಲಕ್ಕೆ ಹೇಗೆ ಬದಲಾವಣೆಗೆ ಒಳಪಡುತ್ತದೆ ಮತ್ತು ಅದನ್ನು ಸಮಾಜವು ಹೇಗೆ ಅನುಸರಿಸಿಕೊಂಡು ನಡೆಯುತ್ತದೆ ಎಂಬುದನ್ನು ತಿಳಿಯುವ ಉದ್ದೇಶವಿದೆ.

1940ರ ನಂತರ ಬಂದ ಸಾಮಾಜಿಕ ಕಾದಂಬರಿಗಳು ಸಮಾಜದಲ್ಲಿರುವ ಸಾಮಾಜಿಕ ಪಿಡುಗುಗಳನ್ನೇ ಕೇಂದ್ರವಾಗಿಟ್ಟುಕೊಂಡು ಸಾಹಿತ್ಯದ ವಸ್ತುವನ್ನಾಗಿ ಮಾಡಿಕೊಂಡವು. ಅವುಗಳನ್ನು ಬಿಡಿಸಿ ಹೇಳುವುದಕ್ಕಾಗಿ ಲಲಿತ ಬರಹಗಳಲ್ಲಿಯೇ ಅತ್ಯಂತ ಜನಪ್ರಿಯವಾದ ಕಾದಂಬರಿಯನ್ನು ಪ್ರಗತಿಶೀಲ ಸಾಹಿತಿಗಳು ಆಯ್ಕೆ ಮಾಡಿಕೊಂಡರು. ಆ ಮೂಲಕವಾಗಿ ಸಮಾಜದ ಅಂದಿನ ಪಿಡುಗುಗಳಾದ ಬಡತನ, ನಿರುದ್ಯೋಗ ಸಮಸ್ಯೆ, ಅನಕ್ಷರತೆ, ವೇಶ್ಯಾವಾಟಿಕೆ ಮುಂತಾದ ಸಾಮಾಜಿಕ ಪಿಡುಗುಗಳನ್ನು ವಿವರವಾಗಿ ಬರೆಯುವ ಕೆಲಸವನ್ನು ಮಾಡಿತೊಡಗಿದರು.

ಇಂತಹ ಸಾಮಾಜಿಕ ಪಿಡುಗುಗಳ ವಿಷಯವನ್ನೇ ಮುಖ್ಯ ಕಥಾ ವಸ್ತುವನ್ನಾಗಿ ಮಾಡಿಕೊಂಡು ತಮ್ಮ ಕಾದಂಬರಿ ರಚಿಸಿದವರಲ್ಲಿ ತ.ರಾ.ಸು.ರವರು ಅತ್ಯುತ್ತಮ ಕಾದಂಬರಿಕಾರರೆಂದು ಗುರುತಿಸಿಕೊಂಡಿದ್ದಾರೆ. ಇದರ ಸಾಮಾಜಿಕ ಕಾದಂಬರಿಗಳಲ್ಲಿ ಸಾಮಾಜಿಕ ಸಂರಚನೆಯ ಆಯಾಮಗಳನ್ನು ಗುರುತಿಸುವುದಷ್ಟೆ ನನ್ನ ಪ್ರಬಂಧದ ಉದ್ದೇಶವಾಗಿದೆ.

ತ.ರಾ.ಸು ರವರು ಅತ್ಯುತ್ಕೃಷ್ಟವಾದ ಐತಿಹಾಸಿಕ ಹಾಗೂ ಸಾಮಾಜಿಕ ಕಾದಂಬರಿಗಳನ್ನು ರಚನೆ ಮಾಡಿದ್ದಾರೆ. ಆದರೆ ನನ್ನ ಪ್ರಬಂಧದ ಮಿತಿಯು ಒಳಗೆ ಕೇವಲ ನಾಲ್ಕು ಸಾಮಾಜಿಕ ಕಾದಂಬರಿಗಳನ್ನು (ಪಂಜರದ ಪಕ್ಷಿ, ಚಂದನದ ಗೊಂಬೆ, ಹೆಣ್ಣು ಕಟ್ಟಿದ ಮನೆ, ಮಸಣದ ಹೂವು) ಆಯ್ಕೆ ಮಾಡಿಕೊಂಡು ಆ

ಕಾದಂಬರಿಗಳ ಮೂಲಕ ಹೇಗೆ ಸಾಮಾಜಿಕ ಸಂರಚನೆಯನ್ನು ನೋಡುವ ಕೆಲಸವನ್ನು ಮಾಡಿದ್ದಾರೆ ಎಂಬುದನ್ನು ವಿಶ್ಲೇಷಿಸುವುದೇ ನನ್ನ ಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

ತ.ರಾ.ಸು.ರವರು ಹಲವು ಐತಿಹಾಸಿಕ ಮತ್ತು ಸಾಮಾಜಿಕ ಕಾದಂಬರಿಗಳನ್ನು ಅತ್ಯುತ್ತಮವಾದ ನೆಲೆಗಟ್ಟಿನಲ್ಲಿ ರಚನೆ ಮಾಡಿದ್ದಾರೆ. ತ.ರಾ.ಸು.ರವರ ಸಮಕಾಲೀನರಾದ ಅ.ನ.ಕೃ (ಕಾದಂಬರಿಗಳ ಸಾರ್ವಭೌಮ) ರವರು ಕೂಡಾ ಅನೇಕ ಸಾಮಾಜಿಕ ಕಾದಂಬರಿಗಳನ್ನು ರಚನೆ ಮಾಡಿದ್ದಾರೆ. ಆದರೆ ನನ್ನ ಅಧ್ಯಯನದ ಮಿತಿಗೆ ತ.ರಾ.ಸು.ರವರ ನಾಲ್ಕು ಸಾಮಾಜಿಕ ಕಾದಂಬರಿಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ನಾನು ಅಧ್ಯಯನ ಮಾಡಲು ಇಚ್ಛಿಸಿರುತ್ತೇನೆ. ಹಾಗಾಗಿ ನನ್ನ ವ್ಯಾಪ್ತಿಯು ಬಹಳ ಸೀಮಿತವಾಗಿದೆ. ಅದರಲ್ಲೂ ತ.ರಾ.ಸುರವರ ಕೇವಲ ನಾಲ್ಕು ಸಾಮಾಜಿಕ ಕಾದಂಬರಿಗಳನ್ನು ಇಟ್ಟುಕೊಂಡು ಅವುಗಳಲ್ಲಿ ಸಾಮಾಜಿಕ ಸಂರಚನೆಯ ಆಯಾಮವನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತಿದ್ದೇನೆ ಮತ್ತು ತಾತ್ಪೂರ್ತಿಕವಾಗಿ, ಸಂದರ್ಭಾನುಸಾರ ಇತರೆ ಕಾದಂಬರಿಕಾರರ ಕಾದಂಬರಿಗಳನ್ನು ಕೂಡಾ ಅಧ್ಯಯನಕ್ಕೆ ಅಗತ್ಯ ಬಿದ್ದರೆ ಅನುಲಕ್ಷಿಸುವ ಕೆಲಸವನ್ನು ಮಾಡುತ್ತೇನೆ.

ನನ್ನ ಅಧ್ಯಯನಕ್ಕೆ ತೆಗೆದುಕೊಂಡಿರುವ ವಸ್ತುವು ವಿಶ್ಲೇಷಣಾತ್ಮಕವಾಗಿ ಇರುವಂತಹದ್ದು, ಏಕೆಂದರೆ ತ.ರಾ.ಸು.ರವರ ನಾಲ್ಕು ಕಾದಂಬರಿಗಳನ್ನೇ ಇಟ್ಟುಕೊಂಡು ಅಧ್ಯಯನ ಮಾಡುತ್ತಿರುವುದರಿಂದ ಒಮ್ಮೊಮ್ಮೆ ವಿವರಣಾತ್ಮಕವಾಗಿ, ಕೆಲವೊಮ್ಮೆ ವಿಶ್ಲೇಷಣಾತ್ಮಕವಾಗಿ ನೋಡುವ ಪ್ರಯತ್ನವನ್ನು ಮಾಡುತ್ತಿದ್ದೇನೆ.

ತ.ರಾ.ಸು.ರವರು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಹೆಚ್ಚಾಗಿ ಭಾರತೀಯ ಮಧ್ಯಮ ವರ್ಗವನ್ನು ಪ್ರತಿನಿಧಿಯಾಗಿಟ್ಟು ಪಾತ್ರ ಸೃಷ್ಟಿಸಿ ರಚನೆ ಮಾಡಿದ್ದರಿಂದ ತ.ರಾ.ಸು.ರವರ ಸಾಮಾಜಿಕ ಕಾದಂಬರಿಗಳ ಪುರುಷ ಪಾತ್ರಗಳ ಸ್ವರೂಪವು ಸ್ತ್ರೀ ಪಾತ್ರಗಳ ಸ್ವರೂಪವು ಬಹಳ ವಿಭಿನ್ನವಾಗಿವೆ. ಇಲ್ಲಿ ಪುರುಷ ಪಾತ್ರಗಳು ಯಜಮಾನಿಕೆಯ ಸ್ವರೂಪ ಪಡೆದಿದ್ದರೆ, ಸ್ತ್ರೀ ಪಾತ್ರಗಳು ಒಂದು ರೀತಿಯ ಅಡಿಯಾಳು ಎಂಬ ಸ್ವರೂಪ ಪಡೆದಿದ್ದು, ಪುರುಷ ಪಾತ್ರ ಯಜಮಾನನಾಗಿಯೂ, ಸ್ತ್ರೀ ಪಾತ್ರವು ಆಳಿನ ಸ್ವರೂಪದಲ್ಲಿ ರೂಪಗೊಂಡಿವೆ.

ಪ್ರಗತಿಶೀಲ ಕಾದಂಬರಿಕಾರರಲ್ಲೆ ಬಹಳ ವಿಭಿನ್ನವಾಗಿ ಆಲೋಚಿಸಿ ತನ್ನ ಕಾದಂಬರಿಗಳ ಸ್ವರೂಪವನ್ನೆ ಬದಲಾಯಿಸಿದ್ದು ತ.ರಾ.ಸು.ರವರ ವಿಶೇಷತೆ. ಕಾರಣ ಕನ್ನಡ ಕಾದಂಬರಿಗಳ ಪಿತಾಮಹಾರೆಂದು ಹೆಸರು ಗಳಿಸಿದ್ದ ಅ.ನ.ಕೃ.ರವರ ಕಾದಂಬರಿಗಳಲ್ಲಿನ ಸಡಿಲ ಬಂಧಕ್ಕೂ, ತ.ರಾ.ಸು. ಕಾದಂಬರಿಗಳಲ್ಲಿನ ಪಾತ್ರಗಳ ಬಿಗಿ ಬಂಧಕ್ಕೂ ಬಹಳ ವಿಶೇಷವಿದೆ. ಪ್ರಮುಖವಾಗಿ ಇಂತಹ ಕಾರಣಕ್ಕಾಗಿಯೇ ತ.ರಾ.ಸುರವರು ತಮ್ಮ ಸಾಮಾಜಿಕ ಕಾದಂಬರಿಗಳ ರಚನೆಯಲ್ಲಿ ಬಹಳ ಭಿನ್ನವಾಗಿ ನಿಲ್ಲುತ್ತಾರೆ.

ಉದಾ: ಅ.ನ.ಕೃ.ರವರು ವೇಶ್ಯಾವಾಟಿಕೆಯನ್ನು ಕುರಿತು ರಚಿಸಿರುವ ಸಾಮಾಜಿಕ ಕಾದಂಬರಿಗಳಾದ ಸಂಜೆಗತ್ತಲು, ಶನಿಸಂತಾನ ಕಾದಂಬರಿಗಳಿಗೂ ತ.ರಾ.ಸು.ರವರ ರಚನೆಯ 'ಮಸಣದ ಹೂವು'

ಕಾದಂಬರಿಗೂ, ಅವುಗಳ ಪಾತ್ರ ಪೋಷಣೆಯಲ್ಲಿ, ಅವುಗಳ ಸಾಮಾಜಿಕ ಜವಾಬ್ದಾರಿಯಲ್ಲಿ, ಮಡಿವಂತಿಕೆ ಸಮಾಜವನ್ನು ಪ್ರಶ್ನಿಸುವ ವಿಷಯದಲ್ಲಿ ತ.ರಾ.ಸು.ರವರ ಸಾಮಾಜಿಕ ಕಾದಂಬರಿಗಳು ಅತ್ಯುತ್ತಮ ಮೌಲ್ಯವನ್ನು ತಿಳಿಸಿಕೊಡುವ ಕಾದಂಬರಿಗಳಾಗಿವೆ. ಹೀಗಾಗಿ ತ.ರಾ.ಸು.ರವರ ಸಾಮಾಜಿಕ ಕಾದಂಬರಿಗಳಲ್ಲಿನ ಪಾತ್ರಗಳು ಮತ್ತು ಅವುಗಳ ಸ್ವರೂಪ ಭಾರತೀಯ ಮಧ್ಯಮ ವರ್ಗವನ್ನು ಪ್ರತಿನಿಧಿಸುವ ಕೆಲಸವನ್ನು ಮಾಡುತ್ತವೆ ಮತ್ತು ವಾಸ್ತವತೆಗೆ ಹತ್ತಿರವಿದ್ದು ಓದುಗರ ಗಮನ ಸೆಳೆದಿವೆ.

## ಅಧ್ಯಾಯ-2

## ಕನ್ನಡ ಕಾದಂಬರಿ ಬೆಳೆದು ಬಂದ ಹಾದಿ

ಇಂದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯು ಬಹುಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ. ಕಾದಂಬರಿಯು ಆಧುನಿಕ ಪ್ರಜ್ಞೆಯ ಫಲವಾಗಿದ್ದು ಅದು ಆಧುನಿಕ ಸಂವೇದನೆಗಳಿಗೆ ತಕ್ಕ ರೂಪವಾಗಿದೆ. ನಿಜವಾದ ಅರ್ಥದಲ್ಲಿ ಕಾದಂಬರಿಗಳು ಮಧ್ಯಮ ವರ್ಗದ ಮಹಾಕಾವ್ಯವಾಗಿದೆ. ಕಾದಂಬರಿ ಪ್ರಕಾರವು ಆಧುನಿಕ ಸಂವೇದನೆಗಳ ಆಧುನಿಕ ಅಗತ್ಯಗಳ ಆವಿಷ್ಕಾರದ ಫಲವಾಗಿದೆ. ಸಾಹಿತ್ಯ ಎನ್ನುವುದು ಕೇವಲ ಲೇಖಕನ ಭಾವನೆ ಮತ್ತು ಸಂಸ್ಕೃತಿಯ ಅಭಿವ್ಯಕ್ತಿ ಮಾತ್ರವಾಗಿರದೆ ಜನಾಂಗದ ಆಶೋತ್ತರ, ಕನಸು, ಬದಲಾಗುತ್ತಿರುವ ಸಂವೇದನೆ ಮತ್ತು ಬದಲಾಗುತ್ತಿರುವ ಜಗತ್ತಿನ ಸ್ವರೂಪವನ್ನು ಸಮರ್ಥವಾಗಿ ಸೆರೆ ಹಿಡಿಯುವ ಮಾಧ್ಯಮವಾಗಿದೆ. ಇಂತಹ ಕಾದಂಬರಿ ಮಾಧ್ಯಮವನ್ನು ಭಿನ್ನ ಭಿನ್ನ ನೆಲೆ ಮತ್ತು ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗುತ್ತದೆ.

ಆಧುನಿಕ ಸಾಹಿತ್ಯ ಪ್ರಕಾರವಾಗಿ ಕಾದಂಬರಿಯು ಬೆಳೆದು ಬಂದ ರೀತಿ ಅನನ್ಯವೂ ಚಾರಿತ್ರಿಕವಾಗಿ ಕುತೂಹಲಕಾರಿಯೂ ಆಗಿದೆ. ಸುಮಾರು ಒಂದು ಶತಮಾನದ ಅವಧಿಯಲ್ಲಿ ವಸ್ತು ಮತ್ತು ವಿನ್ಯಾಸಗಳಲ್ಲಿ ಕಾದಂಬರಿಯು ಸಾಕಷ್ಟು ಅವಸ್ಥಾಂತರಗಳನ್ನು ಹೊಂದಿದೆ. ಕಾದಂಬರಿಯನ್ನು ಡಬ್ಲ್ಯುಹೆಚ್. ಹಡ್ಸನ್ 'ಪಾಕೇಟ್ ಥಿಯೇಟರ್' ಎಂದು ಕರೆದಿದ್ದಾನೆ. ಇದೇ ಮಾತನ್ನೇ ಶ್ರೀ ಕೆ. ವಿ. ಪುಟ್ಟಪ್ಪನವರು 'ಕಾದಂಬರಿಯು ಕರತಲ ರಂಗಭೂಮಿ' ಎಂದು ಕರೆದಿದ್ದಾರೆ. ಕಾದಂಬರಿಯ ಈ ವಿವರಣೆಯಿಂದ ಎರಡು ಮುಖ್ಯವಾದ ಅಂಶಗಳು ವ್ಯಕ್ತವಾಗುತ್ತವೆ.

ಒಂದು ಆರಂಭವೇ ಮುಕ್ತವಾದ ಪ್ರಾಧಾನ್ಯ, ಎರಡನೆಯದು ಪಾತ್ರ ಸೃಷ್ಟಿ, ಕಾದಂಬರಿಯ ಆರಂಭ ಓದುಗನಲ್ಲಿ ಕಾದಂಬರಿಯು ಕ್ರಿಯೆಗೆ ಹದವಾದ ಪರಿಣಾಮವನ್ನು ಮೂಡಿಸುವಂತಿರಬೇಕು, ಮುಕ್ತಾಯ ಕಾದಂಬರಿಯ ಮೂಲ ಭಾವನೆಯನ್ನು ಓದುಗನಲ್ಲಿ ಖಚಿತಪಡಿಸಬೇಕು. ಇಲ್ಲವಾದಲ್ಲಿ ಕಾದಂಬರಿಯ ಉದ್ದೇಶವೇ ನಷ್ಟವಾಗುತ್ತದೆ. ಇಂಕು, ಕಾಗದ, ಸಾಕಷ್ಟು ವಿರಾಮ ಮತ್ತು ತಾಳ್ಮೆಗಳಿದ್ದರೆ ಯಾರೂ ಬೇಕಾದರೂ ಕಾದಂಬರಿ ಬರೆಯಬಹುದು ಎಂಬ ಮಾತು ಕಾದಂಬರಿಯ ಸರಳ, ಸ್ವತಂತ್ರ, ಸ್ವಚ್ಛಂದತೆಯನ್ನು ಕುರಿತು ಹೇಳುತ್ತದೆ. ವಿಶ್ವಸಾಹಿತ್ಯದಲ್ಲಿ ಕಾದಂಬರಿಗೆ ಅದರದೇ ಆದ ವಿಶಿಷ್ಟ ಸ್ಥಾನವಿದ್ದು, ಜನಪ್ರಿಯ ಓದಿನ ಮಾಧ್ಯಮವಾಗಿದೆ. "ಸಾಹಿತ್ಯವು ಸಾಮಾಜಿಕ ಕ್ರಾಂತಿಯ ಹರಿಕಾರನಾಗಬೇಕು" ಕಾದಂಬರಿಗಳಲ್ಲಿ ಭಾರತೀಯ ಸಂಸ್ಕೃತಿಯ ಬೆಳಕನ್ನು ಚೆಲ್ಲಲು ಕಾದಂಬರಿಗಳನ್ನು ರಚಿಸಿದರು. ಕಾದಂಬರಿಯು ಮಧ್ಯಮ ವರ್ಗದ ಜನಪ್ರಿಯ ಮಾಧ್ಯಮವಾಗಿದೆ. ಕೀರ್ತಿನಾಥ ಕುರ್ತಕೋಟಿಯವರು ಕಾದಂಬರಿಯನ್ನು ಕುರಿತು "ಈ ಸಾಹಿತ್ಯ ಪ್ರಕಾರ ಒಂದು ರೀತಿಯಿಂದ ಜನಪದ ಸಾಹಿತ್ಯದಂತೆ, ಸಾಮಾನ್ಯ

ಜನರ ಆಶೋತ್ತರಗಳನ್ನು, ಅಭಿರುಚಿಗಳನ್ನು, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ" ಎಂದು ಅಭಿಪ್ರಾಯಪಡುತ್ತಾರೆ.

ನಮ್ಮ ದೇಶದಲ್ಲಿ ಕಾದಂಬರಿಯ ಪ್ರಕಾರ ಪ್ರಾರಂಭವಾದದ್ದು ಹತ್ತೊಂಬತ್ತನೆಯ ಶತಮಾನದಲ್ಲಿ. ಹತ್ತೊಂಬತ್ತನೆಯ ಶತಮಾನ ಭಾರತೀಯ ಸಾಹಿತ್ಯ ಕ್ಷೇತ್ರಕ್ಕೆ ಪರಿವರ್ತನೆಯನ್ನ, ಪ್ರಬುದ್ಧತೆಯನ್ನು ನೀಡಿದೆ. ಅದಕ್ಕಿಂತ ಮುಂಚೆ ನಮ್ಮಲ್ಲಿ ಕತೆಗಳಿದ್ದಿಲ್ಲವೆಂದಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ನಿರಂತರವಾಗಿ ಸೃಷ್ಟಿಕ್ರಿಯೆ ನಡೆಯುತ್ತಿದ್ದರೂ ಭಾವ-ಭಾಷೆಗಳಲ್ಲಿ, ಆಲೋಚನಾ ಕ್ರಮದಲ್ಲಿ ಹೊಸತನವನ್ನು ಹುರುಪು, ಹುಮ್ಮಸ್ಸನ್ನು ತಂದುಕೊಟ್ಟಿದೆ. ಸಾಹಿತ್ಯದಲ್ಲಿ ಕತೆ ಮೊದಲು ವೇದ, ಉಪನಿಷತ್ತುಗಳಲ್ಲಿ ನೀತಿಕತೆ, ಜನಪದ ಕತೆಗಳಲ್ಲಿ, ಪುರಾಣಗಳಲ್ಲಿ, ಮಹಾಕಾವ್ಯಗಳಲ್ಲಿ, ಕೀರ್ತನೆಗಳಲ್ಲಿ – ಹೀಗೆ ಹಲವಾರು ರೀತಿಯಲ್ಲಿ ಕಥೆ ಬೇರೆ ಬೇರೆ ರೂಪ ತೆಗೆದುಕೊಂಡು ಅವ್ಯಾಹತವಾಗಿ ನಡೆದು ಬಂದಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲೀಷ್ ಸಾಹಿತ್ಯದ ಅಭ್ಯಾಸದಿಂದ ಪ್ರೇರಿತವಾಗಿ, ಆಗಿನ ಸಾಂಸ್ಕೃತಿಕ ಸಂದರ್ಭಕ್ಕೆ ತಕ್ಕಂತೆ ನಮ್ಮ ಭಾರತೀಯ ಭಾಷೆಗಳಲ್ಲಿ ಮೈಪಡೆಯತೊಡಗಿತು. ಬ್ರಿಟೀಷರ ಆಳ್ವಿಕೆಗೆ ಒಳಗಾಗಿದ್ದ ಭಾರತದಲ್ಲಿ ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಮಿಷನರಿಗಳು ಕೈಗೊಂಡ ಸಾಹಿತ್ಯ ಕಾರ್ಯ ಹಾಗೂ ಆಡಳಿತದ ಅನುಕೂಲಕ್ಕಾಗಿ ಬ್ರಿಟೀಷ್ ಅಧಿಕಾರಿಗಳು ಕೈಗೊಂಡ ಮಹತ್ತರ ಕಾರ್ಯಗಳು ಸಾಹಿತ್ಯಾಭಿವೃದ್ಧಿಯ ಹೊಸತನಕ್ಕೆ ನಾಂದಿ ಹಾಡಿವೆ.

ಹೊಸಗನ್ನಡ ಸಾಹಿತ್ಯವು ಕಾಣಿಸಿಕೊಂಡಾಗ ಕಾದಂಬರಿಯ ಪ್ರಕಾರಕ್ಕೆ ಇಂಗ್ಲೀಷ್ ಸಾಹಿತ್ಯದ ಪ್ರಭಾವ–ಪ್ರೇರಣೆಗಳು ಉಂಟಾದವು. ಆರಂಭಿಕ ಕಾದಂಬರಿಗಳಾದ ಮುದ್ರಾಮಂಜೂಷ, ಸೌಗಂಧಿಕ ಪರಿಣಯ', 'ಕಲಾವತಿ ಪರಿಣಯ'ಗಳಲ್ಲಿ ಕಥೆಯ ಚೌಕಟ್ಟು, ಪಾತ್ರಗಳ ಸಹಜ ಚಿತ್ರಣಗಳೂ ಇರುವುದಾಗಿ ವಿದ್ವಾಂಸರುಗಳೇ ಒಕ್ಕಣಿಸಿದ್ದಾರೆ. ಪ್ರಾರಂಭದ ಕಾದಂಬರಿಗಳಲ್ಲಿನ ರಮ್ಯ ಕಥಾನಕಗಳ ಸೃಷ್ಟಿಯ ಸ್ವಭಾವದಿಂದ ಮಾಯಮಂತ್ರಗಳಿಂದ ಕೂಡಿ ಓದುಗನನ್ನು ಮೆಚ್ಚಿಸಿರುವುದಂತೂ ಹೌದು. ವೆಂಕಟಾಚಾರ್ಯರು ಬರೆದ, ಅನುವಾದಿಸಿದ ಕಾದಂಬರಿಗಳಂತೂ ಕನ್ನಡ ಜನಮನವನ್ನು ಸೆರೆಹಿಡಿದು ಅಪಾರ ಪ್ರಖ್ಯಾತಿಯನ್ನು ಗಳಿಸಿದವು.

19ನೇ ಶತಮಾನದ ಮೊದಲರ್ಧದಲ್ಲಿ ಹೊಸಗನ್ನಡ ಸಾಹಿತ್ಯದ ಅರುಣೋದಯವಾಗಿ ಕನ್ನಡ ಸಾಹಿತ್ಯದಲ್ಲೂ ವಿವಿಧ ಪ್ರಕಾರಗಳು ಉದಯವಾಗಿದ್ದಿತು. ಬ್ರಿಟೀಷರ ವಿರುದ್ಧದ ಘೋಷಣೆಗಳೂ, ಸ್ವಾತಂತ್ರ್ಯ ಚಳುವಳಿಯ ನಿಲುವುಗಳು, ರಾಜಕೀಯ ಸಂಘರ್ಷಗಳು ತಲೆ ಎತ್ತಿದ್ದವು. ಶಿಕ್ಷಣ ಕ್ಷೇತ್ರದಲ್ಲಿ ಹೊಸಗಾಳಿ ಬೀಸುತ್ತಿತ್ತು. ಇವೆಲ್ಲದರ ಪ್ರಭಾವ ಪರಿಣಾಮಗಳು ಕಾರಂತರ ಕೃತಿಗಳಲ್ಲಿ ಮೆಲ್ಲನೆ ಸೇರಿ ಕಂಗೊಳಿಸಿವೆ. ಕಾರಂತರ ಬರೆ ಬರೆದು ಎಸೆಯುವ ಸ್ವಭಾವದವರಲ್ಲ. ತಮ್ಮ ಸುತ್ತಲ ಜನರ, ಸಮಾಜದ, ಊರುಕೇರಿಗಳ, ಆಚಾರ–ವಿಚಾರಗಳ, ಸ್ವಭಾವಗಳ, ವಿಭಿನ್ನ ಅನುಭವಗಳನ್ನು ಸಂಚಯಿಸಿ ಸಾವಕಾಶವಾಗಿ ಬರೆದವರು. ಎಲ್ಲೆಲ್ಲೂ ಸುತ್ತಾಡಿ, ಸಂಪರ್ಕ–ಸ್ನೇಹಗಳನ್ನು, ಗಳಿಸಿ, ಜೀವನಾನುಭವವನ್ನು ಅಖಂಡವಾಗಿ ಪೇರಿಸಿಟ್ಟವರು.

ಆದ್ದರಿಂದಲೇ ಕಾರಂತರ ಕಾದಂಬರಿಗಳು ಅನುಭವಗಳ ಭದ್ರಭಾವನೆಗಳ ಮೇಲೆ ಗಟ್ಟಿಯಾಗಿ ಕಟ್ಟಲ್ಪಟ್ಟ ಕೃತಿಗಳು.

ಕಾದಂಬರಿಗಳ ನಿರ್ಮಾಣವು ಬಹು ವಿಸ್ತಾರವಾಗುತ್ತಾ ಸಾಗಿದಂತೆ ಇಂಗ್ಲೀಷ್‌ನ ಪ್ರೇರಣೆಯು ಭಾರತೀಯ ಭಾಷೆಗಳ ಮೇಲೆ ಪ್ರಭಾವ ಬೀರಲು ಆರಂಭಿಸಿತು. ಅದರಲ್ಲೂ ಬಂಗಾಳಿ ಭಾಷೆಯ ಮೇಲೆ ಇಂಗ್ಲಿಷ್‌ನ ಪ್ರಭಾವ ಅಧಿಕವಾಗಿತ್ತು. ಈ ಮೂಲಕ ಭಾರತೀಯ ಭಾಷೆಗಳ ಕಾದಂಬರಿಗಳಲ್ಲಿ ವಿನೂತನವಾದ ಹೊಸ ಆಯಾಮವು ಹುಟ್ಟಿಕೊಂಡಿತು. ಹಾಗೆಯೇ ಹಲವು ಇಂಗ್ಲೀಷ್ ಕಾದಂಬರಿಗಳು ಕನ್ನಡಕ್ಕೂ ತರ್ಜುಮೆಗೊಳ್ಳಲು ಆರಂಭವಾದವು. ಬರವಣಿಗೆಯಲ್ಲೂ ಆರಂಭದಲ್ಲಿ ಕೆಲವು ನಿರ್ಬಂಧಗಳನ್ನು ಒಳಗೊಂಡಿದ್ದ ಕಾದಂಬರಿಗಳು ಮುಂದೆ ಸಾಗುತ್ತಾ ಸಡಿಲತೆಯನ್ನು ತನ್ನ ಬರವಣಿಗೆಗಳಲ್ಲಿ ರೂಢಿಸಿಕೊಳ್ಳುತ್ತ ಹೋಯಿತು.

ಕಾದಂಬರಿಯ ವಸ್ತುವಾಗಿ ಕಾದಂಬರಿಗಳಲ್ಲಿ ತೀರಾ ಸಂಕೀರ್ಣ ವಿಷಯಗಳನ್ನು ತೆಗೆದುಕೊಳ್ಳದೇ ವಿಜೃಂಭಿಸುವ, ಆಕರ್ಷಣೀಯ, ವೈಭವೋಪೇತವಾದ ಅಂಶಗಳು ಆರಂಭಿಕ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಆದ ಕೆಲವು ಸಾಮಾಜಿಕ, ರಾಜಕೀಯ ಬದಲಾವಣೆಗಳಿಂದಾಗಿ ಹೊಸ ಸಾಹಿತ್ಯ ಪ್ರಕಾರಗಳು ಕಾಣಿಸಿಕೊಳ್ಳತೊಡಗಿದವು. ಆಕಾಶ, ಭೂಮಿ, ವಸಂತ, ಸೂರ್ಯ, ಚಂದ್ರ ಮುಂತಾದ ವಿಷಯಗಳ ಬಗ್ಗೆ ಕಾದಂಬರಿಗಳಲ್ಲಿ ವರ್ಣನೆ ಮಾಡುವ ಕಾಲಘಟ್ಟ ಬದಲಾಗಿ ಬಡತನ, ನಿರುದ್ಯೋಗ, ಹಸಿವು, ಲಿಂಗ ತಾರತಮ್ಯ, ಪುರುಷ ಪ್ರಧಾನ ವ್ಯವಸ್ಥೆ, ಬಂಡವಾಳ ಶಾಹಿತ್ವ, ಮುಂತಾದ ಹಲವು ಸಾಮಾಜಿಕ ಸಮಸ್ಯೆಗಳನ್ನು ತಮ್ಮ ಕಾದಂಬರಿಯ ಕಥಾವಸ್ತುವಾಗಿಟ್ಟು ನೇರಾನೇರ ತಮ್ಮ ಕಾದಂಬರಿಗಳಲ್ಲಿ ಹಲವು ಪಾತ್ರಗಳ ಮೂಲಕ, ಇರುವ ನೈಜಸ್ಥಿತಿಯನ್ನು ಹೇಳತೊಡಗಿದರು. ಅದರಲ್ಲೂ ಪ್ರಗತಿಶೀಲ ಕಾದಂಬರಿಕಾರರು ಮಧ್ಯಮ ವರ್ಗದ ಜನರ ನಿತ್ಯದ ಕಷ್ಟಗಳನ್ನು ತಮ್ಮ ಕಾದಂಬರಿಗಳಲ್ಲಿ ನಿಷ್ಠುರವಾಗಿ ಹೇಳತೊಡಗಿದರು.

ಭಾಷೆಯ ಬಳಕೆಯಲ್ಲೂ ಕಾಲದಿಂದ ಕಾಲಕ್ಕೆ ಬದಲಾವಣೆಯನ್ನು ಕಾಣಬಹುದು. ಹೆಣ್ಣಿನ ಸೌಂದರ್ಯವನ್ನೆಲ್ಲಾ ವರ್ಣಿಸುವ ಕಾದಂಬರಿಕಾರರಿಗೆ, ಪ್ರಗತಿಶೀಲ ಕಾದಂಬರಿಕಾರರು ಹೆಣ್ಣಿನ ಮೇಲಿನ ದೌರ್ಜನ್ಯ, ಬಾಲ್ಯವಿವಾಹ, ಸತಿಪದ್ಧತಿ, ವರದಕ್ಷಿಣೆ ಕಿರುಕುಳ ಮುಂತಾದ ಹಲವು ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರಮುಖ ವಸ್ತುಗಳಾಗಿ ಬಳಸಿ ಭಾಷೆಯಲ್ಲೂ ಕೂಡಾ ಅದನ್ನು ನಿರೂಪಿಸಿದರು. ಅದರಲ್ಲೂ ಪ್ರಗತಿಶೀಲ, ದಲಿತ–ಬಂಡಾಯ ಕೃತಿಕಾರರು ಭಾಷೆಯನ್ನು ಖಡ್ಗವಾಗಿ ಬಳಸಿ ಸಾಮಾಜಿಕವಾಗಿ ನಡೆಯುತ್ತಿರುವ ದೌರ್ಜನ್ಯಗಳನ್ನು ನೇರಾನೇರ ನಿಖರವಾದ, ಗಟ್ಟಿಯಾದ ಭಾಷೆಯನ್ನು ಬಳಸತೊಡಗಿದರು. ಆರಂಭದ ಕಾದಂಬರಿಗಳ ನಿರೂಪಣಾ ಶೈಲಿಗೂ ನಂತರದ ಕಾದಂಬರಿಗಳ ನಿರೂಪಣೆಗೂ ಅಜಗಜಾಂತರ

ವ್ಯತ್ಯಾಸ ಕಾಣಬರುತ್ತದೆ. ಆರಂಭದಲ್ಲಿ ಮಡಿವಂತಿಕೆಯುಳ್ಳ ಭಾಷೆಯನ್ನು ಬಳಸುತ್ತಿದ್ದ ಕಾದಂಬರಿಕಾರರು ಮುಂದೆ ಆಡುಮಾತಿನ ಭಾಷಾ ಶೈಲಿಯು ಹೆಚ್ಚು ಜನಮನ್ನಣೆ ಗಳಿಸಲಾರಂಭಿಸಿತು.

ಪಾಶ್ಚಾತ್ಯ ಪ್ರಭಾವದಿಂದ ಕನ್ನಡಕ್ಕೆ ಅನುವಾದಗೊಂಡಂತಹ ಕಾದಂಬರಿಗಳಲ್ಲಿ ಸಾಂಪ್ರದಾಯಿಕ ಚೌಕಟ್ಟಿಗೆ ಒಳಪಟ್ಟದ್ದಾಗ್ಯೂ ಮನರಂಜನೆಯ ಜೊತೆಗೆ ನೀತಿಬೋಧನೆ ಕೃತಿಯ ಮುಖ್ಯ ಆಶಯವಾಗಿದೆ. ನಂತರ ಬಂದಂತಹ ಸ್ವತಂತ್ರ ಕೃತಿಗಳು ಹೊಸಯುಗಕ್ಕೆ ಕಾಲಿಟ್ಟಂತೆ. ಪಾಶ್ಚಾತ್ಯ ಸಾಹಿತ್ಯದ ಅಧ್ಯಯನ ಹೆಚ್ಚಾಗುತ್ತಾ ಹೋದಂತೆ ಸಮಕಾಲೀನ ಸಮಾಜದಲ್ಲಿ ಕಾಣುವಂತಹ ಸಾಮಾಜಿಕ ಏರುಪೇರುಗಳ ಚಿತ್ರಣ, ವ್ಯಕ್ತಿ–ಕುಟುಂಬ–ಸಮಾಜ–ರಾಷ್ಟ್ರ–ಪ್ರಪಂಚ–ವಿಶ್ವ ಈ ಸಂಬಂಧ ಕಾದಂಬರಿಗಳಲ್ಲಿ ತಂತ್ರದ ಹೊಸ ಹೊಸ ಪ್ರಯೋಗಗಳು, ವ್ಯಕ್ತಿ–ವ್ಯಕ್ತಿಗಳ ಸಂಬಂಧಿ, ವ್ಯಕ್ತಿಗತವಾದ ಸುಖ–ದುಃಖಗಳು, ಮಾನಸಿಕವಾದ ಹರ್ಷೋನ್ಮಾದಗಳು, ಓದಲು ಸಂತೋಷವಾಗುವಂತಹ ಸ್ಪಷ್ಟಶೈಲಿ, ವಸ್ತು, ಭಾಷೆ, ದೃಷ್ಟಿಕೋನಗಳ ನಾವೀನ್ಯತೆಯಲ್ಲಿ ಕಾದಂಬರಿ ಪ್ರಕಾರವು ತುಂಬಾ ವೈವಿಧ್ಯಮಯವಾಗಿ ಬೆಳೆಯತೊಡಗಿತು.

ಹೀಗೆ ವೈವಿಧ್ಯಮಯವಾಗಿ ಬೆಳೆದು ಬಂದಂತಹ ಕಾದಂಬರಿಯನ್ನು ಅಧ್ಯಯನ ಹಾಗೂ ವಿಶ್ಲೇಷಣೆಯ ದೃಷ್ಟಿಯಿಂದ, ಐತಿಹಾಸಿಕ ಹಾಗೂ ಪೌರಾಣಿಕ, ರಾಜಕೀಯ, ಸಾಮಾಜಿಕ, ಪತ್ತೇದಾರಿ ಕಾದಂಬರಿಗಳಾಗಿ ವಿಭಜನೆ ಮಾಡಿಕೊಂಡಾಗ ಕ್ರಮಬದ್ಧವಾದ ಅಧ್ಯಯನಕ್ಕೆ ಅನುವು ಮಾಡಿಕೊಡುತ್ತದೆ. ಸಮಾಜವನ್ನು ಸಾಮಾಜಿಕವಾಗಿ ಓದುವ ಅಭ್ಯಾಸ ಬಹಳ ಜನಕ್ಕೆ ಇರುವುದಿಲ್ಲ. ಆದ್ದರಿಂದ ಕಾದಂಬರಿ ರೂಪದಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯ ನೈಜ ಪರಿಸ್ಥಿತಿಯ ಅರಿವು ಮಾಡಿಕೊಡಬೇಕು ಎಂಬ ಉದ್ದೇಶದಿಂದಲೇ ಸಾಮಾಜಿಕ ಕಾದಂಬರಿಗಳ ರಚನೆಗೆ ಕಾರಣವಾಗಿವೆ.

"ಕಾದಂಬರಿಗಳು ಮಾನವ ಸ್ವಭಾವದ ಎಲ್ಲ ಮುಖಗಳನ್ನು ವಾಸ್ತವತೆಯ ಹಿನ್ನೆಲೆಯಲ್ಲಿ ಚಿತ್ರಿಸುತ್ತವೆ. ಆದುದರಿಂದ ಒಂದಲ್ಲ ಒಂದು ಬಗೆಯ ಸಾಮಾಜಿಕ ಹಿನ್ನೆಲೆಯಲ್ಲಿ ವ್ಯಕ್ತಿಗಳ ಹೋರಾಟವನ್ನು ಸಮಸ್ಯೆಯನ್ನು, ಬೆಳವಣಿಗೆಯನ್ನು ಒಳಗೊಂಡಿರುವುದು ಅನಿವಾರ್ಯವಾಗುತ್ತದೆ" ಎಂದು ಹಾ. ಮಾ. ನಾಯಕರು ಅಭಿಪ್ರಾಯಪಡುತ್ತಾರೆ.

ಕಾದಂಬರಿ ಅತ್ಯಂತ ಸ್ವತಂತ್ರವಾದ ಸ್ವಚ್ಛಂದವಾದ ನಿರ್ಮಾಣದಿಂದಾದ ಸಾಹಿತ್ಯ ಪ್ರಕಾರ ಕಾದಂಬರಿಯನ್ನು 'ಕರತಲ ರಂಗಭೂಮಿ' ಎಂದು ಔಚಿತ್ಯಪೂರ್ಣವಾಗಿ ಕರೆಯಲಾಗಿದೆ. ಕಾದಂಬರಿ ಪ್ರಮುಖವಾಗಿ ಶ್ರವ್ಯ ಮಾಧ್ಯಮವಾಗಿರುವುದರಿಂದ ನಾಟಕಕ್ಕೆ ಬೇಕಿರುವ ರಂಗಪರಿಕರ, ಪ್ರೇಕ್ಷಕನ ಅಭಿನಯದ ಅಗತ್ಯವು ಇದಕ್ಕಿರುವುದಿಲ್ಲ. ನಿರಂತರ ಓಘ, ನವಿರಾದ ನಿರೂಪಣೆ, ವಸ್ತುವನ್ನು ಸಂಬದ್ಧವಾಗಿ, ಪರಿಣಾಮಕಾರಿಯಾಗಿ ನಿರೂಪಿಸುವ ಮನಸ್ಥಿತಿ ಕಾದಂಬರಿಕಾರನಿಗಿದ್ದರೆ ಅದು ನಿಜವಾದ

ಕಾದಂಬರಿಯಾಗುತ್ತದೆ. ವಿಶ್ವ ಸಾಹಿತ್ಯದಲ್ಲಿ ಕಾದಂಬರಿಗೆ ಅದರದೇ ಆದ ವಿಶಿಷ್ಟ ಸ್ಥಾನವಿದ್ದು, ಜನಪ್ರಿಯವಾದ ಓದಿನ ಮಾಧ್ಯಮವಾಗಿದೆ.

ಕನ್ನಡದಲ್ಲಿ 'ಕುವೆಂಪುರವರ 'ಕಾನೂನು ಹೆಗ್ಗಡತಿ' 'ಮಲೆಗಳಲ್ಲಿ ಮದುಮಗಳು', ರಾವ್ ಬಹದ್ದೂರರ 'ಗ್ರಾಮಾಯಣ', ಶಿವರಾಮ ಕಾರಂತರ 'ಚೋಮನ ದುಡಿ', ಅಳಿದ ಮೇಲೆ, ಬೆಟ್ಟದ ಜೀವ, ಮಾಸ್ತಿ ವೆಂಕಟೇಶ್ ಅಯ್ಯಂಗಾರರ 'ಚಿಕವೀರರಾಜೇಂದ್ರ', 'ಶಾಂತಿನಾಥ ದೇಸಾಯಿಯವರ 'ಮುಕ್ತಿ' ಪೂರ್ಣ ಚಂದ್ರ ತೇಜಸ್ವಿಯವರ 'ಚಿದಂಬರ ರಹಸ್ಯ', ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ', ಬರಗೂರು ರಾಮಚಂದ್ರಪ್ಪನವರ 'ಸೂರ್ಯ', ದೇವನೂರು ಮಹಾದೇವರ 'ಒಡಲಾಳ', ಕುಸುಮಬಾಲೆ, ಮ. ನ. ಜವರಯ್ಯನವರ 'ಮಾಗಿ', ಅರವಿಂದ ಮಾಲಗತ್ತಿಯವರ 'ಕಾರ್ಯ', ಕುಂ. ವೀರಭದ್ರಪ್ಪನವರ 'ಬೇಲಿ ಮತ್ತು ಹೊಲ' ಹೀಗೆ ಹಲವು ಕಾದಂಬರಿಗಳು ಕನ್ನಡ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದವು. ಜೊತೆಗೆ ಒಂದು ಹೊಸ ಓದುಗ ವರ್ಗವನ್ನು ಸೃಷ್ಟಿಸಿಕೊಳ್ಳುವುದರ ಜೊತೆಗೆ ಇತರೆ ಭಾಷೆಗಳ ಕಾದಂಬರಿಗಳು ಕನ್ನಡಕ್ಕೆ ಭಾಷಾಂತರಗೊಳ್ಳತೊಡಗಿದವು.

ಪ್ರಗತಿಶೀಲ ಕಾದಂಬರಿಕಾರರಲ್ಲೆ ತಮ್ಮ ಕಾದಂಬರಿಗಳನ್ನು ಭಿನ್ನ ನೆಲೆಯಲ್ಲಿ ಓದುಗರಿಗೆ ಕಟ್ಟಿಕೊಟ್ಟವರು ತ.ರಾ.ಸು.ರವರು. ಇವರು ಒಬ್ಬ ಕಲಾತ್ಮಕ ಬರಹಗಾರ. ಕಾದಂಬರಿಗಳನ್ನು ಕೇವಲ ರಂಜಕವಾಗಿಯಷ್ಟೇ ಅಲ್ಲದೆ ಬರಹದಲ್ಲಿ ಕುಸುರಿಯನ್ನೂ ಪೋಣಿಸುವ ಜಾಣ್ಮೆಯೂ ಅವರು ಸಹಜವಾಗಿ ಕರಗತವಾದಂತಿದೆ. ಅವರ ಪ್ರಾರಂಭದಲ್ಲಿನ ಕಾದಂಬರಿ 'ಮುಂಜಾವಿನಿಂದ ಮುಂಜಾವು' ಈ ಕಾದಂಬರಿಯಲ್ಲಿ ಅಂಗಡಿಯ ಯಜಮಾನನ ಚಿತ್ರ, ಕೂಲಿಗಾರನ ಬಾಳಿನ ದುರ್ಬರತೆ ಹಾಗೂ ಪತ್ರಿಕೋದ್ಯಮ ಹಾಗೂ ಅಚ್ಚುಕೂಟದ ಪರಿಸರಗಳಲ್ಲಿನ ಜೀವನದ ಸ್ವರೂಪವನ್ನು ಅತಿ ಸಹಜವೆಂಬಂತೆ ವಿವರಿಸಿದ್ದಾರೆ.

'ಮಸಣದ ಹೂವು' ಎಂಬ ಮತ್ತೊಂದು ಸಾಮಾಜಿಕ ಕಾದಂಬರಿಯ ಮೂಲಕ ಕಾಮದ ತಿರುಗಣಿ ಆಡಿಸಿ, ವೇಶ್ಯಾ ಭಯಂಕರತೆಯನ್ನು, ದುರ್ಭರ ಸಂಕಟವನ್ನೂ ಮನೆಗಳಲ್ಲಿ ಪುನಃ ಪುನಃ ಸುಳಿದಾಡುತ್ತಿದ್ದು ಕಾಣುತ್ತಿರುವಂತೆ ಚಿತ್ರಿಸಿದ್ದಾರೆ.

ಒಂದು ರೀತಿಯ ಕೂಪವೂ, ಕ್ಷುದ್ರವೂ ಆದ ಕಥಾಬಂಧದ ಸಡಿಲ ಹೆಣಿಗೆಯ ಕಾದಂಬರಿಗಳಲ್ಲೂ ತ.ರಾ.ಸು. ಅವರ ಮನೋಹರ ಶೈಲಿ ಓದುಗನ ಮನವನ್ನು ಸೆರೆ ಹಿಡಿದಿಟ್ಟುಕೊಳ್ಳುವುದು. ಆದರೆ ತ.ರಾ.ಸು. ಅವರ ಕಲಾಚಾತುರ್ಯವನ್ನು, ಕೌತುಕ ಮುಷ್ಟಿಯನ್ನು 'ಚಕ್ರತೀರ್ಥ' 'ನಾಗರಹಾವು' ಇತ್ಯಾದಿಗಳಲ್ಲಿ ಮಿಂಚಿರುವುದು ಗಮನಾರ್ಹವಾಗಿದೆ.

ತ.ರಾ.ಸು.ರವರ ಹೆಣ್ಣು ಕಟ್ಟಿದ ಮನೆ, ಪಂಜರದ ಪಕ್ಷಿ, ಚಂದನದ ಗೊಂಬೆ, ಬೇಡದ ಮಗು, ಚಂದವಳ್ಳಿಯ ತೋಟ ಮುಂತಾದ ಸಾಮಾಜಿಕ ಕಾದಂಬರಿಗಳಲ್ಲಿ ಭಾರತೀಯ ಮಧ್ಯಮ ವರ್ಗದ ವ್ಯವಸ್ಥೆಯನ್ನೇ ಪ್ರತಿನಿಧಿಯಾಗಿರಿಸಿ, ತಮ್ಮದೇ ಆದ ಹೊಸ ಪಾತ್ರಗಳನ್ನು ಸೃಷ್ಟಿಸಿ ಮಧ್ಯಮ ವರ್ಗದ ಬವಣೆಗಳನ್ನೇ ದೃಷ್ಟಿಯಾಗಿಟ್ಟು ಹೇಳಿದ್ದಾರೆ. ಭಾಷೆ, ಶೈಲಿ ಹಾಗೂ ತಂತ್ರಗಳಲ್ಲಿ ನೈಪುಣ್ಯತೆ ಹಾಗೂ ತನ್ನ ತನಗಳನ್ನು ಸಾಧಿಸಿಕೊಂಡಿರುವ ತ.ರಾ.ಸು.ರವರು ಸಾಹಿತ್ಯ ಪ್ರೌಢಿಮೆಯನ್ನು ಮೆರೆದಿದ್ದಾರೆ.

## ಅಧ್ಯಾಯ-3

## ತ.ರಾ.ಸು. ಬದುಕು – ಬರಹ

ಇಪ್ಪತ್ತನೆಯ ಶತಮಾನ ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಮಹತ್ವದ ಕಾಲ. ಈ ಕಾಲಘಟ್ಟದಲ್ಲಿ ಎತ್ತರದ ಬಹುಸಂಖ್ಯೆಯ ಸಾಹಿತಿಗಳು ಏಕಕಾಲಕ್ಕೆ ಹುಟ್ಟಿಕೊಂಡು, "ವೈವಿಧ್ಯಮಯವಾದ ಚಲನಶೀಲತೆಯನ್ನು ಹಾಗೂ ಸಮೃದ್ಧಿಯನ್ನು ತಂದಂತಹ ಕಾಲ" ಇಂತಹ ಕಾಲಘಟ್ಟದಲ್ಲಿ ತಮ್ಮ ಸಮಕಾಲೀನ ಸಾಹಿತ್ಯದೊಂದಿಗೆ ನಿರಂತರವಾದ ಸಂವಾದವನ್ನು ಏರ್ಪಡಿಸಿಕೊಂಡು ಸಮಾಜಕ್ಕೆ ಈ ಪರಿಸರಕ್ಕೆ ಸಲ್ಲಿಸುವಂತಹ ಕೊಡುಗೆ ಏನು? ಎಂಬುದನ್ನು ಕಂಡುಕೊಳ್ಳಬೇಕಾಗಿದೆ. "ಸಾಹಿತ್ಯ ನಿಂತ ನೀರಲ್ಲ. ಸಮಕಾಲೀನ ಜೀವನ ಸಾಹಿತಿಗಳ ಮೇಲೆ ಪರಿಣಾಮ ಮಾಡುತ್ತವೆ".

ಬದುಕು ಎಷ್ಟೇ ವೈಯಕ್ತಿಕವಾದರೂ ಸಾಮಾಜಿಕ ಪರಿಸರ ಹಾಗೂ ಕೌಟುಂಬಿಕ ವಾತಾವರಣದಿಂದ ಹೊರಗುಳಿಯಲು ಸಾಧ್ಯವಿಲ್ಲ. ಅದು ವ್ಯಕ್ತಿಯ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ. ವ್ಯಕ್ತಿಗೆ ಸಮಾಜವೇ ಒಂದು ಪಾಠಶಾಲೆ. ತ.ರಾ.ಸು ತಮ್ಮ ಬಾಲ್ಯದ ಬಗ್ಗೆ ಒಂದು ಕಡೆ ಹೀಗೆ ಹೇಳುತ್ತಾರೆ. "ನನ್ನ ಹುಡುಗ ಜೀವನದ ಒಂದೊಂದು ಘಟನೆಗಳೂ, ನನ್ನ ಮೇಲೆ, ನನ್ನ ಸಾಹಿತ್ಯದ ಮೇಲೆ ಪ್ರಭಾವ ಬೀರಿವೆ. ಅಷ್ಟೇ ಏಕೆ ನನ್ನಲ್ಲಿ ಪ್ರತಿಭಟನೆ ಬಂಡಾಯದ ಪ್ರವೃತ್ತಿಯನ್ನು ತಂದವುಗಳೇ ಅವು". ಅವರ ಬಾಲ್ಯದ ಬದುಕಿನ ಘಟನೆಗಳು ತನ್ನ ಮೇಲೆ ಪ್ರಭಾವ ಬೀರಿದ ಇತಿಹಾಸ ಕಾದಂಬರಿ ಕೃತಿಯ ವಸ್ತುವಾಗಿದೆ. ಸಂವೇದನಾಶೀಲ ಬರಹಗಾರ ಇದಕ್ಕೆ ಸ್ಪಂದಿಸುತ್ತಾನೆ, ಸ್ಪಂದಿಸಬೇಕು. ತಮ್ಮ ಸಹಜವಾದ ಪ್ರತಿಭೆ, ಪರಿಶ್ರಮ, ಪಾಂಡಿತ್ಯ, ಸೃಜನಶೀಲ ಕ್ರಿಯೆಗಳಿಂದ ಕನ್ನಡ ನಾಡು ನುಡಿಯ ಸೇವೆ ಮಾಡಿ, ಕನ್ನಡ ನಾಡಿಗೆ ಭಾರತೀಯ ಸಂಸ್ಕೃತಿಗೆ ತನ್ನದೇ ಆದಂತಹ ವಿಶಿಷ್ಟ ಕೊಡುಗೆ ನೀಡಿ, ಭಾರತೀಯ ಪ್ರಸಿದ್ಧ ಸಾಹಿತಿಗಳ ಮೇಲೆ, ಅವರ ಸಾಲಿನಲ್ಲಿ ಚಿರಸ್ಥಾನ ಪಡೆದಂತಹ ಹಲವಾರು ಸಾಹಿತಿಗಳು ಆಗಿ ಹೋಗಿದ್ದಾರೆ. ಕನ್ನಡದ ಇಂತಹ ಹಲವು ಸಾಹಿತಿಗಳಲ್ಲಿ ತ.ರಾ.ಸು. ಒಬ್ಬರೂ.

ತ.ರಾ.ಸು. ಅವರ ಪೂರ್ವಿಕರು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರಿನವರು. ಮುಲಕನಾಡು ಸ್ಮಾರ್ತ ಬ್ರಾಹ್ಮಣರು. ಮನೆ ಮಾತು ತೆಲುಗು. ಇವರ ವಂಶದ ಸೊಸೆ ದೇವರ ರಂಗಮ್ಮ ಮಹಾಸಾಧ್ವಿ, ಕೃಷ್ಣಭಕ್ತೆಯಾದ ಆಕೆಗೆ ತಿರುಪತಿ ವೆಂಕಟರಮಣನ ದರ್ಶನವಾಗಿತ್ತು. ಕನಸಿನಲ್ಲಿ ಬಂದಂತಹ ಭಗವದ್ವಾಣಿಯಂತೆ ದೊರೆತ ವೆಂಕಟರಮಣನ ಸ್ವಾಮಿಯ ವಿಗ್ರಹವನ್ನು ಮೊಳಕಾಲ್ಮೂರಿನಲ್ಲಿ ಪ್ರತಿಷ್ಠಾಪಿಸಿದರು. ಪಾರಂಪರಗತವಾಗಿ ಇವರ ವಂಶದವರೇ ಅದನ್ನು ಪೂಜಿಸುತ್ತಿದ್ದಾರೆ.

ತ.ರಾ.ಸು. ರವರ ಮುತ್ತಜ್ಜರಂತೆ ಅವರ ಅಜ್ಜ ಸುಬ್ಬಣ್ಣನವರು ಅಷ್ಟೇ ರಾಮಭಕ್ತರು ಸುಬ್ಬಣ್ಣನವರಿಗೆ ಅನುರೂಪಳಾದ ದೈವಭಕ್ತೆಯಾದಂತಹ ಧರ್ಮ ಪತ್ನಿ ಲಕ್ಷ್ಮೀ ದೇವಮ್ಮನವರು ತ.ರಾ.ಸು. ದೊಡ್ಡಪ್ಪನವರಾದ

ಪ್ರೊ ಟಿ.ಎಸ್. ವೆಂಕಣಯ್ಯನವರು ಕನ್ನಡ ಸಾಹಿತ್ಯದ ಅಶ್ವಿನಿ ದೇವತೆಗಳಲ್ಲೊಬ್ಬರು. ಸಂಶೋಧಕರು, ವಿಮರ್ಶಕರು, ಮೇಲಾಗಿ ಕನ್ನಡವನ್ನೇ ತಮ್ಮ ಕರುಳಿಗೆ ಅಂಟಿಸಿಕೊಂಡು ಬೆಳೆದವರು. ಕನ್ನಡ ನಾಡಿನ ಜನರ ಪ್ರಾತಃಸ್ಮರಣೀಯರಾದ ಪ್ರೊ॥ ಟಿ. ಎಸ್. ವೆಂಕಣಯ್ಯನವರಂತಹ ಮಗನನ್ನು ಪಡೆದು ಕೀರ್ತಿಶಾಕುಗಳಾದ ಸುಬ್ಬಣ್ಣ ಬಡತನದಲ್ಲೂ ಸಂತೃಪ್ತಿಯ ಜೀವನ ನಡೆಸಿ, ತಮ್ಮ ಎಪ್ಪತ್ತೈದನೆಯ ವಯಸ್ಸಿನಲ್ಲಿ ಅಂದರೆ 1918ರಲ್ಲಿ ಸ್ವರ್ಗಸ್ಥರಾದರು.

ಇಂತಹ ಹಿರಿಯ ಚೇತನರಾಗಿದ್ದ ವೆಂಕಣಯ್ಯನವರು ತ.ರಾ.ಸು. ಅವರ ದೊಡ್ಡಪ್ಪ ತ.ರಾ.ಸು. ಅವರ ಸಾಹಿತ್ಯ ಜೀವನದ ಮೊದಲ ಸ್ಫೂರ್ತಿ ತ.ರಾ.ಸು. ಚಿಕ್ಕಪ್ಪನವರು ಶ್ರೀ ತ.ಸು. ಶಾಮರಾಯರು. ಅವರು ಸಾಹಿತ್ಯ ಹಾಗೂ ಶಿಕ್ಷಣರಂಗದಲ್ಲಿ ಸಲ್ಲಿಸಿದ ಸೇವೆ ಚಿರಸ್ಮರಣೀಯ. ತ.ರಾ.ಸು. ಸೋದರಮಾವ ಕ್ಷೀರಸಾಗರ ಅವರ ಮೂಲ ಹೆಸರು ಜಿ.ಸೀತಾರಾಮಶಾಸ್ತ್ರಿ. ಇವರು ಹೆಸರಾಂತ ನಾಟಕರಾಗಿದ್ದರು. ಅವರ ಅಣ್ಣ ಅನಂತಪ್ಪನವರು ತುಂಬಾ ಸೊಗಸಾಗಿ ಜನಪದ ಹಾಡುಗಳನ್ನು ಹಾಡುತ್ತಿದ್ದರು. ತ.ರಾ.ಸು. ಅವರ ತಂದೆ ರಾಮಸ್ವಾಮಯ್ಯರಿಗೆ ಕತೆ ಹಾಗೂ ಪದ್ಯಗಳನ್ನು ಬರೆಯುವ ಅಭ್ಯಾಸವಿತ್ತು. 'ಅಡಿಕೆಯ ಕಳವು' ಎನ್ನುವ ಕಥಾ ಸಂಕಲನವೊಂದನ್ನು ಪ್ರಕಟಿಸಿದ್ದರು. ಚಿತ್ರದುರ್ಗಕ್ಕೆ ಯಾವ ಗಣ್ಯವ್ಯಕ್ತಿಯೇ ಬರಲಿ ಅವರ ಮೇಲೆ ಸ್ವಾಗತಗೀತೆಯನ್ನು ರಚಿಸುವ ಹೊಣೆಗಾರಿಕೆ ರಾಮಸ್ವಾಮಯ್ಯರಿಗೆ ಇರುತ್ತಿತ್ತು.

1923ರಲ್ಲಿ 'ಶೇಕ್‌ದಾರ್' ಸರ್ಕಾರಿ ಕೆಲಸವನ್ನು ಬಿಟ್ಟು ವಕೀಲಿ ವೃತ್ತಿಯನ್ನು ಆರಂಭಿಸಿದರು. ರಾಮಸ್ವಾಮಯ್ಯನವರದು ದೊಡ್ಡ ಕುಟುಂಬವಾಗಿದ್ದು, ಇವರಿಗೆ ಇಬ್ಬರು ಪತ್ನಿಯರು ಮೊದಲ ಹೆಂಡತಿ ಲಕ್ಷ್ಮೀದೇವಮ್ಮನವರಿಗೆ ಐದು ಹೆಣ್ಣು, ಎರಡು ಗಂಡು ಮಕ್ಕಳು. ಎರಡನೆಯ ಹೆಂಡತಿ ಸೀತಮ್ಮ. ಅವರಿಗೆ ನಾಲ್ಕು ಹೆಣ್ಣು, ಒಂದು ಗಂಡು ಮಗು. ಹೀಗೆ ಸಾಂಪ್ರದಾಯಿಕತೆ, ಧರ್ಮ, ಸಾಹಿತ್ಯ ಇವರ ವಂಶಿಕರಿಗೆ ಹಾಸು ಹಚ್ಚು. ಇಂತಹ ವಾತಾವರಣದಲ್ಲಿ ಜನಿಸಿದ ತ.ರಾ.ಸು. ವಂಶವೇ ಸಾಹಿತ್ಯ ಪರಿಸರದಿಂದ ತುಂಬಿ ತುಳುಕುತ್ತಿತ್ತು.

ತ.ರಾ.ಸು. ರವರು ಆಗಿನ ಚಿತ್ರದುರ್ಗ ಜಿಲ್ಲೆಯ ಈಗಿನ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಮಲೆಬೆನ್ನೂರಿನಲ್ಲಿ 1920ನೇ ಏಪ್ರಿಲ್ 21 (ಬಸವ ಜಯಂತಿ) ರಂದು ಜನಿಸಿದರು. ತಮ್ಮ ತಂದೆಯ ನೆನಪಿಗಾಗಿ ರಾಮಸ್ವಾಮಯ್ಯನವರು ತಮ್ಮ ಮಗನಿಗೆ 'ಸುಬ್ಬರಾಯ' ಎಂದು ನಾಮಕರಣ ಮಾಡಿದರು. ಮುಂದೆ ಸುಬ್ಬರಾಯ ಇಂಗ್ಲೀಷ್‌ನಲ್ಲಿ 'ಸುಬ್ಬರಾವ್', 'ಸುಬ್ಬು', ಸುಬ್ಬಣ್ಣನಾಗಿ ಪ್ರಸಿದ್ಧಿ ಹೊಂದಿದರು.

ರಾಮಸ್ವಾಮಯ್ಯನವರು ತಮ್ಮ ಮಗ ಉತ್ತಮ ವ್ಯಾಸಂಗ ಹಾಗೂ ಸದ್ಗುಣ ಸಂಪನ್ನನಾಗಿ ತನ್ನಂತೆಯೇ ಲಾಯರ್ ಆಗಬೇಕೆಂಬ ಕನಸು ಕಂಡವರು. ಆದರೆ ಅವರ ಮನೆಯ ಸಾಂಪ್ರದಾಯಿಕ ವಾತಾವರಣವೇ ಅವರಿಗೆ ಪ್ರತಿಭಟನಾ ಮನೋಭಾವವು ಬಂದು ಶಾಲೆಯಲ್ಲಿ ಹೇಳಿಕೊಳ್ಳುವಂತಹ ವ್ಯಾಸಂಗ

ಜರುಗಲಿಲ್ಲ. ಆ ಬಗ್ಗೆ ತ.ರಾ.ಸು. ತಮ್ಮ ತಂದೆಯವರನ್ನು ಹೀಗೆ ನೆನೆದಿದ್ದಾರೆ. ನನ್ನ ತಂದೆಯವರ ಸಹನೆ ಅದಕ್ಕೆ ಹೇಗೆ ಕೃತಜ್ಞತೆ ಅರ್ಪಿಸಬೇಕೋ ನನಗೆ ಗೊತ್ತಿಲ್ಲ. ತಮ್ಮ ಹಿರಿಯ ಮಗನ ಬಗ್ಗೆ ತಾವು ಕಂಡ ಕನಸೆಲ್ಲಾ ಹಿಡಿದು ಹೋಗುತ್ತಿದ್ದಾಗ, ಆ ನೋವಿಗೆ ನೀರೆರೆದು ಪೋಷಿಸಲು ಬಂಧು ಮಿತ್ರರ ಬಳಗವಿದ್ದರೂ ಅವರು ನನ್ನನ್ನು ಹೇಗೆ ಸಹಿಸಿದರೋ, ಅವರ ಅಂದಿನ ನೋವಿನ ಆಳ ಈಗ ಸ್ವತಃ ತಂದೆಯಾದ ಮೇಲೆ ನನಗೆ ಅರ್ಥವಾಗುತ್ತಿದೆ. ಯಾವಾಗಲೂ ದುಃಖದ ರೀತಿಯ ಹಾಗೆ, ಅದರ ಕಾವು ಅರ್ಥವಾಗುವುದು ಸ್ವಂತ ಅನುಭವಕ್ಕೆ ಬಂದಾಗಲೇ, ತನ್ನದೇ ಕೈ ಸುಟ್ಟಾಗಲೇ ಬೆಂಕಿಯ ಸುಡುವ ಶಕ್ತಿ ಅನುಭವ ವೇದ್ಯವಾಗುವುದು" ಎನ್ನುತ್ತಾರೆ.

ಸುಬ್ಬಣ್ಣನವರ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಚಿತ್ರದುರ್ಗದಲ್ಲಿಯೇ ನಡೆಯಿತು. ಹೊರ ಪ್ರಪಂಚದಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದ ಸುಬ್ಬಣ್ಣರಿಗೆ ನಾಟಕ ಸಿನಿಮಾ ನೋಡುವ ಗೀಳು, ಹೋಟೇಲ್ ತಿಂಡಿಯ ಹುಚ್ಚು, ಹಣ ಸಿಗದಿದ್ದರೆ ಸಾಲ. ತಂದೆಯ ಜೇಬಿನಿಂದ ಹಣ ಕದ್ದು ಒಂಭತ್ತನೇ ವಯಸ್ಸಿನಲ್ಲೇ ಸಿಗರೇಟು ಸೇದುವ ಚಟ ಬೇರೆ. ಇದಲ್ಲದೇ ದುರ್ಗದ ಬೆಟ್ಟಗಳಲ್ಲಿ ಒಂಟಿಯಾಗಿ ಅಡ್ಡಾಡುವುದು.

ತ.ರಾ.ಸು ಅವರ ಓದಿಗೆ ಒಂದು ಹೊತ್ತು ಗುರಿ ಇರಲಿಲ್ಲ. ಅದೊಂದು ಶ್ರಮರಹಿತ ಓದು. ಕಥೆ, ಕಾದಂಬರಿ, ಕವಿತೆ, ಇತಿಹಾಸ, ವಿಜ್ಞಾನ, ರಾಜಕೀಯ ಹೀಗೆ ಯಾವ ಪುಸ್ತಕ ಸಿಕ್ಕರೆ ಅದು ಪೂರ್ಣ ಓದಿ ಮುಗಿಸುತ್ತಿದ್ದರು. ವಯಸ್ಸು ಬೆಳೆದಂತೆ ಓದುವ ಗೀಳು ಬೆಳೆಯಿತು. ಪಠ್ಯಪುಸ್ತಕ ಓದದೇ ಬೇರೆ ಏನನ್ನೋ ಓದುತ್ತಿರುವುದರಿಂದ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಿರಲಿಲ್ಲ. ತಂದೆ ಮಗನಲ್ಲಿ ಮನಸ್ತಾಪ ಬೆಳೆಯಿತು. ತುಂಬಿದ ಮನೆಯಲ್ಲಿ ಒಂದು ರೀತಿ ಬಂಡಾಯಗಾರರಾಗಿ, ಗುಂಪಿನ ಮಧ್ಯೆ ಏಕಾಂಗಿಯಾಗಿ ಬಾಳಬೇಕಾಗಿ ಬಂದಾಗ ತ.ರಾ.ಸು ಅವರಿಗೆ ಮಾಡಿದ ಮಹದುಪಕಾರ ಓದು ಹುಚ್ಚು ಹಿಡಿಸಿದ್ದು.

"ನನ್ನ ಬಾಳಿನ ಮೂಲಭೂತ ಸೂತ್ರವೇ ಪ್ರತಿಭಟನೆ. ಇಚ್ಛೆ ಇಲ್ಲದ ಕೆಲಸವನ್ನು ಒತ್ತಾಯ ಪೂರ್ವಕವಾಗಿ ಮಾಡಲು ತಿಳಿಸಿದರೆ ಅದನ್ನು ಪ್ರತಿಭಟಿಸುತ್ತಿದ್ದೆ. ಈ ಪ್ರತಿಭಟನೆಯೇ ನನ್ನ ಬಾಳನ್ನು ರೂಪಿಸಿದ ರೂವಾರಿ ಎಂದು ನನಗೆ ಎನ್ನಿಸುತ್ತದೆ ಎಂದು ಒಂದು ಕಡೆ ತ.ರಾ.ಸು. ಹೇಳಿಕೊಳ್ಳುತ್ತಾರೆ.

ಬಿ.ಎಂ.ಶ್ರೀ, ಮಾಸ್ತಿ, ವಿ.ಸೀ. ದೇವುಡು ಮೊದಲಾದವರನ್ನು ಮನೆಯಲ್ಲಿಯೇ ಬಾಲಕ ತ.ರಾ.ಸು ಕಂಡಿದ್ದರು. ರಾಮಸ್ವಾಮಯ್ಯನವರಿಗಿದ್ದ ಅಗಡಿಯ ಶೇಷಾಚಲ ಭಗವಾನರಲ್ಲಿದ್ದ ಭಕ್ತಿಯ ಫಲವಾಗಿ ಗಳಗನಾಥರು, ಶ್ರೀ. ಶಾ. ಕಾಳೆಯವರು, ಧಾರವಾಡದ ಗೆಳೆಯರ ಗುಂಪಿನ ಪುಸ್ತಕಗಳನ್ನು ಮಾರಾಟ ಪ್ರಚಾರಕ್ಕೆ ತರುತ್ತಿದ್ದ ನರೇಗಲ್ ಪ್ರಹ್ಲಾದರಾಯರು–ಇವರೇ ಬೆಂದ್ರೆಯ ಪದ್ಯಗಳ ಹುಚ್ಚನ್ನು ತ.ರಾ.ಸು. ಅವರಿಗೆ ಹಿಡಿಸಿದ್ದು.

"ಮನೆಯ ತುಂಬೆಲ್ಲಾ ಇಷ್ಟೆಲ್ಲಾ ಸಾಹಿತ್ಯದ ವಾತಾವರಣವಿತ್ತು. ವಂಶಾನುಗತವಾದ ಸಾಹಿತ್ಯ ಪ್ರೀತಿಯೂ ನನ್ನಲ್ಲಿತ್ತು. ಓದುವ ಹುಚ್ಚು, ಒಂಟಿಯಾಗಿ ಗುಡ್ಡಬೆಟ್ಟಗಳಲ್ಲಿ ಅಲೆಯುವುದು, ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳುತ್ತಿದ್ದ ಕಥೆಗಳು ಇವೆಲ್ಲವೂ ನನ್ನ ತಲೆಯಲ್ಲಿ ಏನೋ ಒಂದು ಬಗೆಯ ಅಮಲನ್ನು ಕವಿಸಿದ್ದವು. ಆದರೆ ಅದನ್ನು ಬರವಣಿಗೆಯಲ್ಲಿ ಅಭಿವ್ಯಕ್ತಿಸುವ ಹವ್ಯಾಸ ನನ್ನಲ್ಲಿರಲಿಲ್ಲ. ಆ ಕಾಲಕ್ಕೆ ನಾನು ಕೆಲಸಕ್ಕೆ ಬಾರದ ವಾಚಾಳಿಯಾಗಿದ್ದೆ. ಅಂತಹ ನನಗೆ, ನಾನು ಬರೆಯಬಲ್ಲೆ ಎಂಬ ಆತ್ಮವಿಶ್ವಾಸವನ್ನು ಮೂಡಿಸಿದವರು ನನ್ನ ದೊಡ್ಡಪ್ಪ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರು" ಎಂದು ಹೆಮ್ಮೆಯಿಂದ ಹೇಳುತ್ತಾರೆ.

ಒಮ್ಮೆ ಚಿತ್ರದುರ್ಗಕ್ಕೆ ಬಂದ ವೆಂಕಣ್ಣಯ್ಯನವರು ತ.ರಾ.ಸು.ರವರಿಗೆ ಕಥೆ ಬರೆಯುವಂತೆ ಸವಾಲನ್ನು ಎಸೆದರು. ಆ ಸವಾಲನ್ನು ಸ್ವೀಕರಿಸಿ ತ.ರಾ.ಸು ಬರೆದ ಮೊದಲ ಕತೆ 'ಪುಟ್ಟನ ಚೆಂಡು' ಬರೆದು ಹತ್ತು ರೂಗಳ ಇನಾಮು ಪಡೆದರು. ಅದಾವ ಅಮೃತ ಮುಹೂರ್ತದಲ್ಲಿ ಬರೆಯಲು ಪ್ರೇರೇಪಿಸಿದರೋ, ಆ ಹಿರಿಯರ ಶಕ್ತಿ ತ.ರಾ.ಸು.ರವರನ್ನು ಪೂರ್ಣ ಬರಹಗಾರರಾಗುವಂತೆ ಮಾಡಿತು.

ನಂತರ ತ.ರಾ.ಸು. ಬರೆದ 'ರಣಯಂತ್ರ ನಾಟಕ', 'ಬಾರಬ್ಬಾಸ್ ಕತೆ', ಬೆಟಗೇರಿ ಕೃಷ್ಣಶರ್ಮಾರ ಸಂಪಾದಕತ್ವದ 'ಜಯಂತಿ' ಮಾಸಪತ್ರಿಕೆಯಲ್ಲಿ ಪ್ರಕಟವಾದವು. 'ಕಬೀರರ ಕವಿತೆಗಳಲ್ಲಿ 'ಆಧ್ಯಾತ್ಮಿಕ ಭಾವವಿಕಾಸ' ಎಂಬ ಪ್ರಬಂಧ ಬರೆದ ಆ ಕಾಲದ ಶ್ರೇಷ್ಠ ಮಾಸಪತ್ರಿಕೆ ಎನಿಸಿದ ಬೇಂದ್ರೆಯವರ 'ಚೇತನಕ್ಕೆ ಕಳುಹಿಸಿಕೊಟ್ಟರು.

ತ.ರಾ.ಸು. ಅವರಲ್ಲಿದ್ದ ಓದುವ, ಬರೆಯುವ ಶಕ್ತಿಯನ್ನು ಗುರುತಿಸಿ ಉತ್ತೇಜಿಸಿದವರು ಅನೇಕ ಅಧ್ಯಾಪಕರು. ಹೊಯ್ಸಳ ಕಾವ್ಯನಾಮದ ಎ.ಲಕ್ಷ್ಮಣರಾಯರು, ಬಿ. ಎಸ್. ನಂಜುಂಡಶಾಸ್ತ್ರಿ, ಎಸ್. ಆರ್. ನರಸಿಂಹಾಚಾರ್, ಎಚ್. ಶ್ರೀನಿವಾಸ ರಾಘವಾಚಾರ್ಯರು, ಸಂಪತ್ಕುಮಾರಾಚಾರ್ಯರು, ಪರಮ ಸುಬ್ಬಯ್ಯನವರು, ಡಿ.ಎಂ. ಶೇಷಗಿರಿರಾಯರು ಮುಂತಾದವರ ಪ್ರೋತ್ಸಾಹದಿಂದ ಬರಹದಿಂದ ರೂಢಿಸಿಕೊಂಡರು.

"ಜೀವನದಲ್ಲಿ ತನ್ನ ಸುತ್ತಮುತ್ತಲ ವಾತಾವರಣದಿಂದ ಪ್ರತಿಭಟಿಸುವ ಮನೋಭಾವವನ್ನು ಯಾವುದೋ ಕಾರಣಕ್ಕೆ ಬೆಳೆಸಿಕೊಂಡಿದ್ದು ಅದು ನನಗೆ ರಾಜಕೀಯ ಹಾಗೂ ಸಾಹಿತ್ಯಾಭ್ಯಾಸ ಪ್ರತಿಭಟನಾ ಮನೋಭಾವ ಕ್ರಿಯಾಶೀಲವಾಗಲು ದಿಕ್ಸೂಚಿಗಳಾದವು" ಎನ್ನುತ್ತಾರೆ. "ಅಂಥ ಕ್ರಾಂತಿಕಾರಿ ಮಾರ್ಗದತ್ತ, ಕ್ರಾಂತಿಕಾರಿ ಜೀವನದ ಕಥೆಗಳನ್ನು ಓದಿದ ನನಗೆ ಅವು ಅರ್ಥವಾದವೋ ಇಲ್ಲವೋ ನಾನು ಹೇಳಲಾರೆ. ಆದರೆ ನನ್ನ ಮನಸ್ಸು ಮಾತ್ರ ಆ ಕ್ರಾಂತಿಕಾರಿ ಮಾರ್ಗದತ್ತ ಒಲಿಯಿತು. ಅಂಥ ಹಂಬಲ ಮೂಡಿತು. ರಿವಾಲ್ವರ್ ಬಾಂಬುಗಳ ಮಾತು ನನಗೆ ಬಹಳ ಪ್ರಿಯವಾಗಿತ್ತು" ಎಂದು ಅಭಿಪ್ರಾಯಪಡುತ್ತಾರೆ. ಜೊತೆಗೆ

ಅಣ್ಣಯ್ಯನ ಪೇಟೆ ಸಾಹೇಬರು" ಎಂಬ ಹೆಸರಿನ ಯುವಕರ ತಂಡದಲ್ಲಿ ತ.ರಾ.ಸು. ಆಡದೇ ಇದ್ದ ತುಂಟಾಟವಿರಲಿಲ್ಲ. ಇದೇ ಪರಿಸರದಲ್ಲಿ, ಸ್ನೇಹಿತರ ಒಡನಾಟದಲ್ಲಿ ಬೆಳೆದ ತ.ರಾ.ಸು. ರಾಮಾಚಾರಿ ಪಾತ್ರದ 'ನಾಗರಹಾವು' ಕಾದಂಬರಿ ಸೃಷ್ಟಿಸಿದ್ದು.

ಮುಂದೆ ತ.ರಾ.ಸು. ಪ್ರಗತಿಶೀಲ ಲೇಖಕರೆನಿಸಿ ನಾಡಿನಲ್ಲೆಲ್ಲಾ ಹೆಸರಾದಾಗ ಕೆಲವರು ಚಿತ್ರದುರ್ಗದ ಬಗ್ಗೆ ಮಾತ್ರವೇ ಬರೆಯುತ್ತಾರೆಂದು ಮೂದಲಿಸಿದರು. ಆ ವೇಳೆಗಾಗಲೇ ಸಿದ್ದವ್ವನಹಳ್ಳಿ ಕೃಷ್ಣಶರ್ಮರ ಭಾಷೆ, ಶೈಲಿಯನ್ನು ರೂಢಿಸಿಕೊಂಡಿದ್ದು, 'ವಿಶ್ವ ಕರ್ನಾಟಕ' ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಕೆಲಸ ಮಾಡಿದರು.

ರಾಷ್ಟ್ರಕೂಟ ಚಕ್ರವರ್ತಿಯನ್ನು ಕುರಿತ 'ನೃಪತುಂಗ' ಎಂಬ ಐತಿಹಾಸಿಕ ಕಾದಂಬರಿ ರಚಿಸಿದರು. 'ಹಂಸಗೀತೆ' ಕಾದಂಬರಿಯನ್ನು ಬರೆದು ಜೋಯಿಸರಿಗೆ ಅರ್ಪಿಸಿದರು. ಮುಂದೆ ಕೆಲವೇ ವರ್ಷಗಳಲ್ಲಿ 'ಕಂಬನಿಯ ಕುಯಿಲು' ರಕ್ತರಾತ್ರಿ' 'ತಿರುಗುಬಾಣ' ಕಾದಂಬರಿಗಳನ್ನು ಬರೆದು ಚಿತ್ರದುರ್ಗದ ಇತಿಹಾಸವನ್ನು ಕನ್ನಡ ನಾಡಿನುದ್ದಕ್ಕೂ ಮೆರೆಸಿದರು.

ತ.ರಾ.ಸು. ಅವರ ಮೇಲೆ ಗಾಢವಾದ ಪ್ರಭಾವ ಬೀರಿದ ಇನ್ನೊಬ್ಬ ಮಹನೀಯರೆಂದರೆ ಅ.ನ.ಕೃಷ್ಣರಾಯರು. ಕಲೆಯ ಮೇಲೆ ಪ್ರಭಾವ ಬೀರಿದರೆ, ಜೀವನಾವಲೋಕನ ದೃಷ್ಟಿ, ಚಿಂತನೆ, ಅಧ್ಯಯನಕ್ಕೆ ಸಾಣೆ ಹಿಡಿದು ಯುವಕ ತ.ರಾ.ಸು. ಅವರನ್ನು ಒಬ್ಬ ಸಮರ್ಥ ಲೇಖಕನಾಗುವಂತೆ ರೂಪಿಸಿದವರು ಅ.ನ.ಕೃ. "ನಾಡಿಗೆ ಕೊಟ್ಟ ಅ.ನ.ಕೃ. ಅವರ ಕೊಡುಗೆಗಳಲ್ಲಿ ತ.ರಾ.ಸು. ಒಬ್ಬರು" ಎಂದು ನಾ. ಪ್ರಭಾಕರ್ ಹೆಮ್ಮೆಯಿಂದ ಹೇಳುತ್ತಾರೆ.

1969ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ತ.ರಾ.ಸು. ಅವರನ್ನು "ಶ್ರೇಷ್ಠಕಾದಂಬರಿಕಾರ" ಎಂದು ಸನ್ಮಾನಿಸಲಾಯಿತು.

ಮೊದಲ ಕೃತಿ ಬರೆದಾಗ ಟೀಕಿಸಿದ್ದ ಮಾಸ್ತಿಯವರೆ ತುಂಬು ಹೃದಯದಿಂದ ತ.ರಾ.ಸು. ಅವರಿಗೆ ಶಾಲು ಹೊದಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದರು. ಈ ಸಂದರ್ಭದಲ್ಲಿ ಆನಂದಾಶ್ರು ಸುರಿಸಿದ ಅ.ನ.ಕೃ. ರಾಮಸ್ವಾಮಯ್ಯನವರನ್ನು ಕುರಿತು "ಏನು ರಾಮಸ್ವಾಮಯ್ಯನವರೇ, ನಿಮ್ಮ ಮಗ ಏನೋ ಆಗಿ ಬಿಡುತ್ತಾನೆಂದು ಕಳವಳ ಪಡ್ತಾ ಇದ್ದಿರಲ್ಲ....... ಈಗ ಏನು ಹೇಳ್ತಿರಲ? ಎಂದು ಹೃದಯ ತುಂಬಿ ಕೇಳಿದರು. "ನಿಮ್ಮ ಶಿಷ್ಯ ನಮ್ಮ ವಂಶಕ್ಕೆ ಕೀರ್ತಿ ತಂದಿದ್ದಾನೆ. ನಿಮ್ಮಷ್ಟೇ ಸಂತೋಷ ನನಗೂ ಆಗಿದೆ" ಎಂದಷ್ಟೇ ಹೇಳಿದರು ರಾಮಸ್ವಾಮಯ್ಯ.

'ವಿಶ್ವ ಕರ್ನಾಟಕ, ಪ್ರಜಾಮತ' ವಾರಪತ್ರಿಕೆಗಳ ನಂತರ ಎಂ.ಎಸ್. ಚಿಂತಾಮಣಿಯವರ 'ವಾಹಿನಿ' ವಾರಪತ್ರಿಕೆಯ ಶಕ್ತಿಯಾಗಿ ದುಡಿದರು. ಚಿತ್ರದುರ್ಗದಲ್ಲಿ ತಮ್ಮ ಸ್ನೇಹಿತ ಶ್ರೀಧರಮೂರ್ತಿ 'ನವೋದಯ'

ಪತ್ರಿಕೆಗೂ ಇವರ ಕೈಚಳಕ ನಡೆದಿದೆ. 1949ರಲ್ಲಿ ಬೆಂಗಳೂರಿಗೆ ಬಂದು 'ಪ್ರಜಾವಾಣಿ' ಪತ್ರಿಕೆಯಲ್ಲಿ 'ಮುಖ್ಯ ಉಪಸಂಪಾದಕರಾಗಿ ಸೇರಿಕೊಂಡರು.

ಪತ್ರಿಕಾರಂಗದ ರಾಜಕೀಯಕ್ಕೆ ಬೇಸತ್ತು ವಿಶ್ರಾಂತಿಗೆ ಮೈಸೂರಿಗೆಂದು ಬಂದು 1944ರಲ್ಲಿ 'ಅಂಬುಜಾ' ಅವರನ್ನು ವಿವಾಹವಾದರು. 1950ರಲ್ಲಿ ಬರಹಗಾರರಾಗಿಯೇ ಬದುಕುವ ಸಂಕಲ್ಪ ಮಾಡಿ ಅಂಬುಜಾರವರ ಜೊತೆ ಮೈಸೂರಲ್ಲೆ ಸಂಸಾರ ಹೂಡಿದರು.

ಚಿತ್ರದುರ್ಗದ ಇತಿಹಾಸದ ಮೇಲೆ ಕಂಬನಿಯ ಕುಯಿಲು, ರಕ್ತರಾತ್ರಿ, ತಿರುಗುಬಾಣ ಮುಂತಾದ ಕಾದಂಬರಿಗಳನ್ನು ಬರೆದು ಮನೆಮಾತಾದರು. ತ.ರಾ.ಸು. ಬರೆದ ಐತಿಹಾಸಿಕ ಕಾದಂಬರಿಗಳು ಪಂಡಿತ–ಪಾಮರರ ಮೆಚ್ಚುಗೆ ಗಳಿಸಿದವು. ಐತಿಹಾಸಿಕ ಕಾದಂಬರಿ ರಚನೆಯಲ್ಲಿ ಹೆಸರಾಗಿದ್ದ ವೀರಕೇಸರಿ ಸೀತರಾಮಶಾಸ್ತ್ರಿ ಅವರು "ಅದ್ವಿತೀಯ ಐತಿಹಾಸಿಕ ಕಾದಂಬರಿಕಾರ" ಎಂದು ತುಂಬು ಹೃದಯದಿಂದ ಹೊಗಳಿದರು.

'ನೃಪತುಂಗ', 'ಹಂಸಗೀತೆ', 'ಚಂದವಳ್ಳಿಯ ತೋಟ', 'ಶಿಲ್ಪಶ್ರೀ', 'ಬೆಳಕು ತಂದ ಬಾಲಕ' ಮುಂತಾದ ಕಾದಂಬರಿಗಳು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳಾದವು. 'ಹಂಸಗೀತೆ' ಕಾದಂಬರಿ ಹಿಂದಿ ಭಾಷೆಯಲ್ಲಿ ಪ್ರಕಟವಾಗಿ 'ಬಸಂತ್ ಬಹಾರ್' ಚಲನಚಿತ್ರವಾಗಿ ಯಶಸ್ವಿಯಾಯಿತು. ರಾಷ್ಟ್ರ ಪ್ರಶಸ್ತಿ ಕೂಡ ಗಳಿಸಿತು. ತ.ರಾ.ಸು. ಬರೆಯುವುದರಲ್ಲಿ ತೃಪ್ತರಾಗದೇ ಕಲೆ, ಸಂಗೀತ, ಇತಿಹಾಸ, ವಿಜ್ಞಾನ, ತತ್ವಶಾಸ್ತ್ರ, ರಾಜಕಾರಣ ಮುಂತಾದ ವಿಷಯಗಳಲ್ಲಿ ಆಸಕ್ತಿ ಹೊಂದಿದ್ದರು. ತ.ರಾ.ಸು. ನಾಡು ನುಡಿಗಾಗಿ ಸೇವೆ ಸಲ್ಲಿಸಿದ್ದಾರೆ.

11–8–1981 ರಿಂದ 29–12–1981 ರ ಅವಧಿಯಲ್ಲಿ 'ದುರ್ಗಾಸ್ತಮಾನ' ಕಾದಂಬರಿಯನ್ನು ಬರೆದು ಮುಗಿಸಿದರು. 10–04–1984 ರಂದು ಮಂಗಳವಾರ ಶ್ರೀರಾಮನವಮಿ ದಿನ ಬೆಂಗಳೂರಿನಲ್ಲಿ ಅಸ್ತಮಿಸಿದರು. ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚಿಂತಿಸುತ್ತಿದ್ದ ತ.ರಾ.ಸು. ಕನ್ನಡಪರ ಹೋರಾಟಗಳನ್ನು ಮಾಡುತ್ತಾ "ಕನ್ನಡಕ್ಕಾಗಿ ಹೋರಾಡಿದರು ಅವಿಶ್ರಾಂತವಾಗಿ ದುಡಿದರು".

# ಅಧ್ಯಾಯ-4

# ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳಲ್ಲಿ ವಸ್ತುವೈವಿಧ್ಯ

## 4.1 ಸ್ತ್ರೀ ಪಾತ್ರಗಳು

ಮಹಿಳೆಯು ಸಾಮಾಜಿಕ ಕ್ಷೇತ್ರಗಳಲ್ಲಿ ಸಾಕಷ್ಟು ಕೆಲಸ ಮಾಡಿದ್ದು ಹಿಂದಿನ ಕಾಲಘಟ್ಟದಲ್ಲಿ ಮಹಿಳೆ ಮಾಡಿರುವ ಕೆಲಸಗಳ ಪರಿಚಯವನ್ನು ಶಾಸನಗಳು ನೀಡುತ್ತವೆ. ಕೆಲವು ನಾಗತಿಯರು, ಗೌಡತಿಯರು, ಸಾಮಾನ್ಯ ಹೆಣ್ಣು ಮಕ್ಕಳು ಸಹ ತಮ್ಮ ಕೆಲಸ ಕಾರ್ಯಗಳಿಂದ, ಧೈರ್ಯದಿಂದ, ಶೌರ್ಯದಿಂದ, ಮುತ್ಸದ್ಧಿತನದಿಂದ ಉತ್ತಮ ಸ್ಥಾನಮಾನವನ್ನು ಗಳಿಸಿಕೊಂಡು ಪುರುಷರಷ್ಟೇ ಸಮಾನವಾಗಿ ನಿಲ್ಲುತ್ತಾರೆ. ದೇವಾಲಯ ಕಟ್ಟುವುದರಲ್ಲಿ, ಕೆರೆ ಕಟ್ಟೆಗಳ ನಿರ್ಮಾಣ, ದಾನ ದತ್ತಿ ನೀಡುವುದರಲ್ಲಿ ಎಲ್ಲಾ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ಸಹ ಮಾಡುತ್ತಾ ಎಲ್ಲಾ ರೀತಿಯ ಉತ್ಸವ ಕಾರ್ಯಗಳಲ್ಲಿ ಪಾಲ್ಗೊಂಡು ಸಮಾಜೋನ್ಮುಖಿಯಾಗಿರುವುದನ್ನು ಕಾಣುತ್ತೇವೆ.

ಸಮಾಜದಲ್ಲಿ ಕೆಲವು ಕಟ್ಟುಪಾಡುಗಳಿದ್ದು ಜಾತೀಯತೆ, ಮೂಢನಂಬಿಕೆ, ಸಾಂಪ್ರದಾಯಿಕತೆ, ವೇಶ್ಯಾಪದ್ಧತಿ, ದೇವದಾಸಿ ಪದ್ಧತಿ, ಬಹುಪತ್ನಿತ್ವ, ಸತಿಸಹಗಮನ ಪದ್ಧತಿಗಳಿದ್ದು ಕೆಲವು ಸನ್ನಿವೇಶಗಳಿಗನುಗುಣವಾಗಿ ಹೆಣ್ಣನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದುದು ಉಂಟು. ಇನ್ನು ಕೆಲವು ಸಂದರ್ಭಗಳಲ್ಲಿ ಅವರು ಸಾಧಿಸಿದ ಸಾಧನೆಯನ್ನು ಕುರಿತು ಅವರಿಗೆ ವಿಶೇಷ ಸ್ಥಾನಮಾನ ನೀಡಿ ಗೌರವಿಸುತ್ತಿದುದು ಉಂಟು. ದೇವಾಲಯಗಳಲ್ಲಿ ಅಂಗಭೋಗ, ರಂಗಭೋಗ ಸೇವೆ ಹೆಚ್ಚಿದಂತೆಲ್ಲಾ ದೇವಾಲಯದ ಸೇವೆಗೆ ಮದುವೆಯಾಗದ ಹೆಣ್ಣುಗಳನ್ನು ಬಿಡುತ್ತಿದ್ದರು. ಇವರನ್ನು "ದೇವದಾಸಿಯರು" ಎಂದು ಭಕ್ತಿಯಿಂದ, ಮರ್ಯಾದೆಯಿಂದ ಕರೆಯುತ್ತಿದ್ದರು. ಇವರು ಸಾಮಾನ್ಯ ವೇಶ್ಯೆಯರಿಗಿಂತ ಭಿನ್ನವಾಗಿ ತಮ್ಮದೇ ಆದ ಒಂದು ಬಗೆಯ ಸಾಮಾಜಿಕ ನಿಯಮ ಪಾಲಿಸಿಕೊಂಡು ಬರುತ್ತಿದ್ದರು, "ಬೇಡಮ ಬೋಯ ಹಾಗೂ ಹರಿಜನರಲ್ಲಿ ಈ ಪದ್ಧತಿ ಇರುವುದು ಕಂಡು ಬರುತ್ತದೆ". ದೇವರನ್ನು ಮದುವೆಯಾದ ಅವಳು ಎಂದೆಂದಿಗೂ ಮುತ್ತೈದೆಯೇ ಆಗಿರುವಳು. ಇವರಿಗೂ ವೇಶ್ಯೆಯರಿಗೂ ಇದ್ದ ವ್ಯತ್ಯಾಸವೆಂದರೆ ಇವರು ನಾಟ್ಯ, ಸಂಗೀತ, ಹಾವಭಾವಗಳಿಂದ ಸೇವೆ ಮಾಡಿದರೆ, ವೇಶ್ಯೆಯರು ಇತರೆ ಸೇವೆಗಳನ್ನು ಮಾಡುತ್ತಿದ್ದರು. ಶ್ರೀಮಂತರ ಮನೆಗಳಲ್ಲಿ ಮದುವೆಯಾದರೆ ಊರಿನ ಧಾರ್ಮಿಕ ಕಾರ್ಯಗಳಲ್ಲಿ ಇವರಿಗೆ ಅಗ್ರಸ್ಥಾನವಿರುತ್ತಿತ್ತು. ಮೆರವಣಿಗೆ ಮುಂದುಗಡೆ ಇವರು ನೃತ್ಯ ಮಾಡುತ್ತಾ ಹೋದರೆ ಉಳಿದವರು ಅನುಸರಿಸುತ್ತಿದ್ದರು. ಇವರಿಗೆ ದಾನ-ದತ್ತಿಗಳನ್ನು ಕೊಡುತ್ತಿದ್ದರು. ಇವರಿಗೆ ಮತ್ತೊಂದು ಹೆಸರು 'ಬಂಗಾರದವರು'.

ಒಟ್ಟಾರೆ ಮಹಿಳೆಯು ಇಂದು ಎಲ್ಲಾ ರಂಗಗಳಲ್ಲಿಯೂ ತನ್ನದೇ ಆದ ಛಾಪು ಮೂಡಿಸುತ್ತಿದ್ದಾಳೆ. ಆದರೆ ಹಿಂದಿನ ಕಾಲಘಟಕ್ಕೆ ಹೋಲಿಸಿದರೆ ಹೆಣ್ಣಿಗೆ ಇಂದಿನ ಮಟ್ಟದ ಸ್ವಾತಂತ್ರ್ಯವಿರಲಿಲ್ಲ. ಅದು ತ.ರಾ.ಸು

ಅವರ ಕಾದಂಬರಿಗಳಲ್ಲಿ ಹೆಣ್ಣಿನ ಪಾತ್ರವನ್ನು ವಿಶೇಷವಾಗಿ ಚಿತ್ರಿಸಿದ್ದಾರೆ. ಕೆಲವು ಸ್ತ್ರೀ ಪಾತ್ರಗಳು ಬಡತನದ ಬೇಗೆಯಲ್ಲೂ ನರಳುತ್ತಾ ಸಾಗಿದರೆ, ಕೆಲವು ಸ್ತ್ರೀ ಪಾತ್ರಗಳು ಪರಿಸ್ಥಿತಿಗೆ ತಕ್ಕಂತೆ ತಮ್ಮ ಅಸಹಾಯಕ ಧೋರಣೆಯಲ್ಲಿ ಸಾಗಿವೆ. ಅಂಥ ಸ್ತ್ರೀ ಪಾತ್ರಗಳ ಅವಲೋಕನ ಮಾಡಬೇಕಾಗಿದೆ.

### 4.1.1. ಕೋಮಲಾ (ಪಂಜರದ ಪಕ್ಷಿ)

'ಪಂಜರದ ಪಕ್ಷಿ' ಕಾದಂಬರಿಯು ತ.ರಾ.ಸು. ರವರು ಸಾಮಾಜಿಕ ಹಿನ್ನೆಲೆಯಲ್ಲಿ ರೂಪುಗೊಂಡ ಕಾದಂಬರಿ. ಕಾದಂಬರಿಯ ಪ್ರಮುಖ ಪಾತ್ರ, ಕಥಾನಾಯಕಿಯೇ ಈ ಕೋಮಲಾ. ತನ್ನ ಜೀವನದಲ್ಲಿ ಎಲ್ಲಾ ಪರಿಸ್ಥಿತಿಗಳಿಗೂ ತನ್ನನ್ನು ಒಗ್ಗಿಸಿಕೊಂಡು ಪರಿಸ್ಥಿತಿಯ ಶಿಶುವಾಗಿ ಕಾಣಿಸಿಕೊಳ್ಳುತ್ತಾಳೆ. ಜೀವನದ ಹಲವು ಸಂದರ್ಭಗಳಿಗೆ ತನ್ನನ್ನು ಒಳಗು ಮಾಡಿಕೊಂಡು ತನ್ನ ಹಣೆಬರಹವನ್ನೇ ನೆಚ್ಚಿ ತನ್ನ ಪಾಡಿಗೆ ಪಾಲಿಗೆ ಬಂದಿದ್ದು ಪಂಚಾಮೃತವೆಂದು ಭಾವಿಸಿ ಬದುಕು ಸಾಗಿಸುವ ಪಾತ್ರವೇ ಕೋಮಲಾ. ಜೀವನದಲ್ಲಿನ ತನ್ನ ಆಸೆ–ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗದೇ ಪರಿಸ್ಥಿತಿಗೆ ಸಿಲುಕಿ ನಿಜವಾಗಲೂ 'ಪಂಜರದ ಪಕ್ಷಿಯಾಗಿಯೇ' ಉಳಿದುಕೊಳ್ಳುತ್ತಾಳೆ.

ಕಾದಂಬರಿಯ ಆರಂಭವೇ ಕೋಮಲಾಳ ಮೂಲಕ ಆರಂಭವಾಗುತ್ತದೆ. ತನ್ನ ಆಫೀಸಿನಿಂದ ಹಲವು ಫರ್ಲಾಂಗುಗಳ ದೂರವಿರುವ ತನ್ನ ಮನೆಗೆ ಸಿಟಿ ಬಸ್ ಮೂಲಕ ಹೋಗುತ್ತಾಳೆ. ಇಲ್ಲಿ ಇವಳ ಬದುಕು ತನ್ನ ಮನೆ ಮತ್ತು ಕಛೇರಿಯ ನಡುವಣ ಸೇತುವೆಯಾಗಿದೆ. ಬಸ್‌ನಿಂದ ಇಳಿದು ಮನೆಗೆ ನಡೆದುಕೊಂಡು ಬರುವ ಸಮಯದಲ್ಲಿ ದಾರಿಯ ಒಂದು ಮಗ್ಗುಲಿಗೆ ಸಿಗುವ ನಾಯರ್ ದಂಪತಿಗಳನ್ನು ಕಂಡು ಅತೀವ ಆನಂದವಾಗುತ್ತದೆ. ಆ ಮನೆಯನ್ನು ಬೆಳಗಲು ಅವರಿಗೆ ಒಂದು ಗಂಡು ಮಗು. ಈ ಮೂಲಕ ತನಗೂ ಈ ಹೊತ್ತಿಗೆ ಮದುವೆಯಾಗಿದ್ದರೆ ಅಂತಹ ಭಾಗ್ಯ ನನ್ನದಾಗುತ್ತಿತ್ತು ಎಂಬ ಬಯಕೆ ಅವಳಲ್ಲಿ ಮನೆ ಮಾಡಿದೆ.

ಮುಂದೆ ಸಾಗಿ ಮನೆ ತಲುಪಿದರೆ 'ಅಕ್ಕ ಬಂದ್ಲು' ಎಂಬ ನಾಲ್ಕಾರು ಮಕ್ಕಳ ಕಿಲಕಿಲ ಧ್ವನಿ ಜೊತೆಗೆ ಪುಸ್ತಕ, ರಿಬ್ಬನ್, ಸೀಸದ ಕಡ್ಡಿ, ಚಾಕೋಲೆಟ್ ತಂದಿದ್ದಾಳೆಂಬ ಬೇಡಿಕೆ ಮತ್ತೊಂದು ಕಡೆ. ಅಂದರೆ ಆ ಚಿಕ್ಕ ಮಕ್ಕಳ ಪಾಲಿಗೆ ಕೋಮಲಾಳೇ ಆಧಾರಸ್ತಂಭ. ಅಷ್ಟರಲ್ಲೇ ತಮ್ಮ ವಿಶ್ವನಾಥನು ತನ್ನ ಅಕ್ಕನ ಬಳಿ ಬಂದು "ಕಥೆ ಹೇಳಕ್ಕಾ ಕಥೆ" ಎಂದು ಪೀಡಿಸುವನು. ಮುಂದೆ ಕೋಮಲಾ ತನ್ನದೇ ಕಥೆಯನ್ನು ಬೇರೆ ಬೇರೆ ಪಾತ್ರಗಳ ಮೂಲಕ ಹೇಳಲು ಆರಂಭಿಸಿದಾಗ ವಿಶ್ವನಾಥನಿಗೆ ಆ ಕಥೆ ಹಿಡಿಸದೇ ಕೇಳಲು ನಿರಾಕರಿಸುವನು. ಅಂದರೆ ಇಲ್ಲಿ ಕೋಮಲಾ ಭಾರತೀಯ ಮಧ್ಯಮ ವರ್ಗದ, ಬಡ ಕುಟುಂಬದಲ್ಲಿನ ಹೆಣ್ಣಿನ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತಾಳೆ. ತನ್ನ ಕಥೆಯನ್ನೇ ತಮ್ಮನಿಗೆ ಹೇಳುವ ಮೂಲಕ ಅಡಿಗೆ ಮನೆಯಲ್ಲಿದ್ದ ತಾಯಿ

ಕನಕಮ್ಮನಿಗೆ ಮಾರ್ಮಿಕವಾಗಿ ತಿವಿಯುತ್ತಾಳೆ. ಏನೇ ಆದರೂ ಸಾಂದರ್ಭಿಕ ಶಿಶುವಾಗಿ ಕಾಣಿಸಿಕೊಂಡು ಏನೂ ಮಾಡದ ಸ್ಥಿತಿಯಲ್ಲಿ ಕಾಲ ದೂಡುತ್ತಿದ್ದಾಳೆ ಕೋಮಲಾ.

ಮತ್ತೊಂದೆಡೆ ತಾನು ಮದುವೆಯಾಗಿ ಮಕ್ಕಳನ್ನು ಮುದ್ದಿಸುವ ಸಮಯದಲ್ಲಿ ತನ್ನನ್ನು ಹಡೆದ ಬಸಿರೇ ಮತ್ತೊಂದು ಮಗುವನ್ನು ಹಡೆದು ಇವಳ ಕೈಯಲ್ಲಿಟ್ಟು ಅದನ್ನು ನೋಡುವ ಕಾಯಕವು ಇವಳ ಪಾಲಿಗೆ ಒದಗಿ ಬಂದಿತು.

ಆ ಮಬ್ಬು ಸಂಜೆಗತ್ತಲಲ್ಲಿ ಆ ಮಗುವನ್ನು ತನ್ನೆದೆಗೆ ಒರಗಿಸಿಕೊಂಡ ಕೋಮಲಾ 'ಬರೆದ ನಂಗಾಲಾಚೆ ಕರೆದ ಜೀವವ ಚಾಚಿ ನೊಂದೇನೇ ಬಹಳ ನೊಂದೇನೆ ಸಖಿ ಮುಂದೇನೇ? ಎಂದು ಹಾಡಿಕೊಳ್ಳುತ್ತಾ ತನ್ನ ಬದುಕಿನಲ್ಲಿ ನಡೆಯುತ್ತಿರುವ ಕಷ್ಟಕಾರ್ಪಣ್ಯಗಳನ್ನು, ತಾನು ಅನುಭವಿಸುತ್ತಿರುವ ಯಮಯಾತನೆಯನ್ನು ಬದುಕಿನ ಆಶಾಗೋಪುರವೇ ಚೂರುಚೂರಾಗಿ ಒಡೆದು ಹೋಗುತ್ತಿದ್ದು, ಅದನ್ನು ಯಾರಲ್ಲೂ ಹೇಳದೇ ತನ್ನಲ್ಲಿರುವ ಬದುಕಿನ ಆಸೆಗಳನ್ನು ಹೀಗೆ ಹಾಡಿನ ಮೂಲಕ ಹಾಡಿಕೊಂಡು ತನ್ನ ಬದುಕೇ ಸೂತ್ರ ಹರಿದ ಗಾಳಿಪಟದಂತಾಗಿದೆಯಲ್ಲಾ ಎಂದು ಮನಸ್ಸಿನಲ್ಲಿ ಕೊರಗುತ್ತಾಳೆ. ಇಲ್ಲಿ ಈ ಹಾಡು ಬಹಳ ಅರ್ಥಗರ್ಭಿತವಾಗಿ ತ.ರಾ.ಸು. ತಂದಿದ್ದು, ಸಾಮಾಜಿಕ ಸಂರಚನೆಯ ಒಳ-ಹೊರಗನ್ನು ತುಂಬಾ ಅದ್ಭುತವಾಗಿ ಕೋಮಲಾ ಪಾತ್ರಧಾರಿಯಲ್ಲಿ ತುಂಬಿದ್ದಾರೆ. ಕಾರಣ ಕೋಮಲಾಳ ಸ್ಥಿತಿಯೇ ಭಾರತದ ಹಲವು ಕುಟುಂಬಗಳಲ್ಲಿನ ಹೆಣ್ಣು ಮಕ್ಕಳ ಕಥೆ-ವ್ಯಥೆ. ಕುಟುಂಬ ನಿರ್ವಹಣೆಯ ಜವಾಬ್ದಾರಿ ಹೊತ್ತ ಹೆಣ್ಣು ತನ್ನ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ಕುಟುಂಬವನ್ನು ಸಾಕುವ ಹೊಣೆ ಹೊರುತ್ತಾಳೆ. ತನ್ನಲ್ಲಿ ಎಷ್ಟೇ ಮಾನಸಿಕ ತುಮುಲಗಳಿದ್ದರೂ ಅವನ್ನೆಲ್ಲಾ ತನ್ನಲ್ಲೆ ಅದುಮಿಟ್ಟು ಹೊರ ಪ್ರಪಂಚಕ್ಕೆ ತಾನು ಸಂತೋಷವಾಗಿಯೇ ಇದ್ದೇನೆ ಎಂದು ನಗುಮುಖವನ್ನು ತೋರುತ್ತಾಳೆ.

ಕೋಮುಲಾಳ ಕಣ್ಣೀರು ಬೆಂಬೂದಿಯನ್ನು ಕೆದಕಿದಂತೆ, ಆಕೆಯ ನೆನಪನ್ನು ಮುಸುಕಿದ ವಿಸ್ಮೃತಿಯ ಬೂದಿಯನ್ನು ಕೆದಕಿ, ತನ್ನ ಬಾಳಿನಲ್ಲಿ ಆಗಿಹೋದ ಬೇಕಾದ ನೆನಪುಗಳು, ಬೇಡವಾದ ನೆನಪುಗಳು, ಬೇಕಾಗಿಯೂ ಬೇಡವಾಗಿ ತಾನೇ ವಿಸ್ಮೃತಿಯಾಳಕ್ಕೆ ತಳ್ಳಿದ ನೆನಪುಗಳು.

ತನ್ನ ಅಣ್ಣ ಗೋಪಾಲಕೃಷ್ಣನು ಇದ್ದಾಗ ತನ್ನ ಬಗೆಗೆ ಇದ್ದ ಅವನ ಆಸಕ್ತಿ, ತನ್ನೆಲ್ಲಾ ಕಾರ್ಯಗಳಿಗೂ ಬೆಂಗಾವಲಿಗೆ ಇದ್ದವನು ಅವನು. ತಾನು ಹಾಡು ಹಾಡುತ್ತಿದ್ದರೆ, ಅದು ಅದ್ಭುತವಾಗಿದೆ ಎಂದು ಪ್ರೋತ್ಸಾಹ ನೀಡಿ, ಮುಂದೆ ಯಾವುದಾದರೂ ಕಾರ್ಯಕ್ರಮದಲ್ಲಿ ಕೋಮಲಾ ಹಾಡಬೇಕೆಂದು ಒತ್ತಾಯಿಸಿದ್ದನು. ಆಗ ತನ್ನ ತಾಯೇ ಅದನ್ನು ವಿರೋಧಿಸಿದ್ದು ಅಂದಿನ ಸಮಾಜ ಹೇಗೆ ಹೆಣ್ಣಿನ ಬಗೆಗೆ ತಾತ್ಸಾರ ಮನೋಭಾವನೆ ಹೊಂದಿತ್ತು ಎಂಬುದನ್ನು ತಿಳಿಸುತ್ತದೆ. ಏಕೆಂದರೆ ಕೋಮಲಾಳ ತಾಯಿಯ ಏಕೈಕ ಗುರಿಯೇ ಕೋಮಲಾಳಿಗೆ ಉತ್ತಮವಾದ ಒಬ್ಬ ವರನನ್ನು ನೋಡಿ ಅವಳಿಗೆ ಮದುವೆಯನ್ನು ಮಾಡಿ ಅವಳನ್ನು ಒಂದು ಹೊರೆ ಎಂದು

ನಿರ್ಧರಿಸಿ ಮತ್ತೊಂದು ಮನೆಗೆ ಸಾಗಹಾಕುವುದು. ಅದಕ್ಕೆ ಭಾರತೀಯ ಸಮಾಜದಲ್ಲಿನ ಹೆಣ್ಣಿನ ಧೋರಣೆಯೇ ಕಾರಣ. ಇದು ಭಾರತೀಯ ಸಾಮಾಜಿಕ ಸಂರಚನೆಯ ದ್ಯೋತಕವೇ ಹೀಗೆ ಹೆಣ್ಣಿನ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿ, ಅದಕ್ಕೆ ಮದುವೆ ಎಂಬ ಬೇಡಿಯನ್ನು ಹಾಕಿ ಸಂಪ್ರದಾಯ, ಸಂಸ್ಕೃತಿ ಹೆಸರಿನಲ್ಲಿ ಹೆಣ್ಣನ್ನು ಕಟ್ಟಿಹಾಕುವುದೇ ಆಗಿತ್ತು.

ಮತ್ತೊಂದೆಡೆ ಕೋಮಲಾಗೆ ತನ್ನ ಅಣ್ಣ ಗೋಪಾಲಕೃಷ್ಣನು ಹಾಡನ್ನು ಹೇಳಿಕೊಡುತ್ತೇನೆ ಎಂದು ಹೇಳಿದಾಗ ಕೋಮಲಾಳು ಅದಕ್ಕೆ ಸರಿ ಎಂದಾಗ ತಾಯಿ ಕನಕಮ್ಮನವರು ನಿರಾಕರಿಸಿ ಹೆಣ್ಣಿರುವುದು ಮನೆಯ ಚಾಕರಿ ಮಾಡಲು, ಗಂಡನ ಸೇವೆ ಮಾಡುವುದಕ್ಕೆ ಹೊರತು ಈ ರೀತಿಯ ಸಂಗೀತ, ಹಾಡು ಕಲಿಯುವುದಕ್ಕೆ ಅಲ್ಲ ಎನ್ನುವುದು ಸ್ತ್ರೀ ವಿರೋಧಿ ಧೋರಣೆಯನ್ನು ನೋಡಬಹುದು. ಹಾಡು ಕಲಿಯುವುದು ಮಹಾಪರಾಧವೆಂಬಂತೆ ತ.ರಾ.ಸು. ರವರು ಕನಕಮ್ಮರ ಮೂಲಕ ಹೇಳಿಸಿರುವುದು ಖೇದಕರ ಸಂಗತಿ. ಏಕೆಂದರೆ ಅಲ್ಲಿ ತನ್ನ ತಾಯಿಯ ಪ್ರಕಾರ ನಡೆಯಲಿ ಎಂದು ಆಶಿಸಬಹುದಿತ್ತು. ಅದನ್ನು ತ.ರಾ.ಸು. ಅವರು ಕನಕಮ್ಮನವರ ಮೂಲಕ ಹೇಳಿಸಬಹುದಿತ್ತು. ಈ ಮೂಲಕ ಮತ್ತೆ ಸಾಮಾಜಿಕ ಸಂರಚನೆಯ ಸೋಗಿನಲ್ಲಿ ಹೆಣ್ಣನ್ನು ಅವಮಾನಕ್ಕೆ ದೂಡಿರುವುದೇ ಕಂಡು ಬರುತ್ತದೆ. ಗೊಡ್ಡು ಸಂಪ್ರದಾಯಗಳ ನೆಪ ಒಡ್ಡಿ ಕೋಮಲಾಗೆ ಸಂಗೀತ ಕಲಿಯಲು ನಿರಾಕರಿಸುವುದು ಉತ್ತಮ ಬೆಳವಣಿಗೆಯಲ್ಲ. ಇದನ್ನು ಪ್ರತಿಭಟಿಸುವ ಗೋಪಾಲಕೃಷ್ಣನ ಮಾತಿಗೂ ಮನ್ನಣೆ ನೀಡದೇ ಹೆಣ್ಣು ಕೇವಲ ಅಡಿಗೆ ಮನೆಯಲ್ಲಿನ ಯಂತ್ರದಂತೆ ಎಂದು ಭಾವಿಸಿರುವುದು ಲಿಂಗ ಅಸಮಾನತೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದಂತಾಗುತ್ತದೆ. ಇಲ್ಲಿ ಕಮಲಮ್ಮನವರೇ ಹಾಡು ಕಲಿಯಲು ಇಚ್ಛಿಸುವ ಕೋಮಲೆಗೆ ಸಮಾಜದ ಧೋರಣೆಯನ್ನು ಮುಂದಿಟ್ಟು "ನಾಳೆ ದಿನ ಹಾಡು ಕಲಿಯಲು ಹೋದರೆ ಸಮಾಜವು 'ನಾಚಿಕೆ ಕಟ್ಟೋಳುಂತ ಆಡಿಕೊಳ್ಳುತ್ತೆ" ಎಂದು ಸಮಾಜದ ಗೊಡ್ಡು ಸಂಪ್ರದಾಯಕ್ಕೆ ಹೆದರಿ ಕೋಮಲೆಯ ಆಸೆಗೆ ಯಾವುದೇ ಮನ್ನಣೆ ಸಿಗುವುದಿಲ್ಲ.

ಕೋಮಲಾಳ ವಿಷಯದಲ್ಲಿ ಅವಳ ಮುಂದಿನ ಓದಿಗೆ ಅಣ್ಣ ಗೋಪಾಲಕೃಷ್ಣ ಒತ್ತಾಯಿಸಿದರೂ ಬಿ. ಎ. ಬ್ಯಾರಿಸ್ಟರ್ ಮಾಡಿಸಬೇಕು ಎಂದುಕೊಂಡರೂ ತಾಯಿ ಕನಕಮ್ಮನವರು ಹಣಕಾಸು, ಬಡತನ, ಸಮಾಜ ಮುಂತಾದವುಗಳ ನೆಪವೊಡ್ಡಿ ಅದಕ್ಕೂ ನಿರಾಕರಿಸುತ್ತಾರೆ. ಅಂದರೆ ಸಾಮಾಜಿಕ ಸಂರಚನೆಯು ಹೀಗೆಯೇ ಇರಬೇಕೆಂಬ ರೀತಿ ಅದು ಮೇಲ್ಮಟ್ಟದ ಸ್ತರಗಳನ್ನು ಮುಟ್ಟಲೇಬಾರದೆಂಬ ಧೋರಣೆಯೇ ಕೋಮಲಾ ಪಾತ್ರವು ಎಲ್ಲಾ ರೀತಿಯಲ್ಲೂ ಶೋಷಣೆಗೆ ಒಳಗಾಗುತ್ತಲೇ ಹೋಗುತ್ತದೆ.

ಅನಾರೋಗ್ಯ ನಿಮಿತ್ತ ಗೋವಿಂದರಾಯರನ್ನು ಕೆಲಸದಿಂದ ತೆಗೆದು ಅವರ ಪೆನ್ಷನ್ ಹಣದ ಜೊತೆಗೆ ಮನೆಗೆ ಕಳುಹಿಸಿ "ನಿಮ್ಮ ಸೇವೆ ಇಲ್ಲಿಗೆ ಸಾಕು" ಎಂದು ಅವರ ಯಜಮಾನರು ಹೇಳಿದಾಗ ಗೋವಿಂದರಾಯರಿಗೆ ದಿಕ್ಕೇ ತೋಚದಂತಾಯಿತು. ಆ ಸಮಯದಲ್ಲಿ ಕನಕಮ್ಮನವರು ಬಂದ ಪೆನ್ಷನ್ ಹಣದಿಂದ ಮಗಳ ಮದುವೆಯನ್ನು ಮಾಡಿ ಮುಗಿಸೋಣ ಎಂದುಕೊಂಡಾಗ ಆ ಮೂಲಕ ತಂದೆ–

ತಾಯಿಯಾಗಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕೆಂದುಕೊಂಡಾಗ ಗೋವಿಂದರಾಯರು ಆ ಹಣವನ್ನು ಮಗಳ ಮದುವೆ ಖರ್ಚಿಗೆ ನೀಡಲು ನಿರಾಕರಿಸಿದರು. ಆ ಮೂಲಕ ಇಡೀ ಸಂಸಾರವನ್ನು ಕಾಪಾಡಬೇಕಾಗಿರುವುದು ಆ ಹಣದಿಂದಲೇ. ಆದ್ದರಿಂದ ಮುಂದೆ ಮದುವೆ ವಿಷಯದ ಮಾತು ಎನ್ನುವುದರ ಮೂಲಕ ಒಬ್ಬ ತಂದೆಯಾಗಿ ತನ್ನ ಜವಾಬ್ದಾರಿ ಮರೆತ ಗೋವಿಂದರಾಯರು ಬೆಳೆದು ನಿಂತ ಮಗಳ ಬಗ್ಗೆ ಯಾವುದೇ ಯೋಚನೆ ಮಾಡದಿರುವುದು, ಅದಕ್ಕಿಂತ ಮುಖ್ಯವಾಗಿ ಇದೇ ಸಂಸಾರವನ್ನು ಭವಿಷ್ಯದಲ್ಲಿ ಮಗಳು ಕೋಮಲಾಳೇ ನಿಭಾಯಿಸಬೇಕು ಎಂಬ ಆಣತಿಯನ್ನು ಇಡುತ್ತಾನೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ತನ್ನ ಸಂಸಾರವನ್ನು ಕಾಪಾಡಲು ಮಗಳನ್ನು ಕೆಲಸಕ್ಕೆ ಸೇರಿಸುವುದು, ಹಾಗೆಯೇ ತಾನು ಜವಾಬ್ದಾರಿಯಿಂದ ನುಣುಚಿಕೊಳ್ಳುವುದು ಎಂಬ ಉದ್ದೇಶಗಳು ಇಲ್ಲಿ ಅಡಗಿದೆ. ಇಲ್ಲಿ ಸಂಸಾರ ಜವಾಬ್ದಾರಿಯ ನೆಪವೊಡ್ಡಿ ಕೋಮಲಾಳನ್ನು ಕೆಲಸಕ್ಕೆ ಸೇರಿಸಲು ತಂದೆ ಗೋವಿಂದರಾಯರು ತಯಾರಾಗಿದ್ದು ಯಾವ ನ್ಯಾಯ? ಇಲ್ಲಿ ಅವರ ಪುರುಷ ಪ್ರಧಾನ ಧೋರಣೆಯು ಅಡ್ಡಿ ಬರಲಿಲ್ಲವೇ? ಈ ಮೂಲಕ ಸಾಮಾಜಿಕ ಸಂರಚನೆಯು ಹೆಣ್ಣಿಗೂ ಕಾಲಕ್ಕೆ ತಕ್ಕಂತೆ ಒಂದಷ್ಟು ಸ್ವಾತಂತ್ರ್ಯ, ಸಮಾನತೆಯ ಹಕ್ಕನ್ನು ನೀಡಬಹುದು ಎಂಬುದನ್ನು ಅಂದಿನ ಕಾಲಘಟ್ಟದ ಮಟ್ಟಿಗೆ ತೋರಿಸುತ್ತದೆ. ಮತ್ತೇ ಇಲ್ಲಿ ಬಲಿಪಶುವಾಗುವುದು, ಸಾಂದರ್ಭಿಕ ಶಿಶುವಾಗುವುದು ಕೋಮಲಾ.

ಗೋವಿಂದರಾಯರು ಮಗಳು ಕೋಮಲಾಳಿಗೆ ಕಂಪ್ಯೂಟರ್ ಟೈಪಿಂಗ್ ಟ್ರೈನಿಂಗ್‌ಗೆ ಸೇರಿಸಿ ಮುಂದೆ ಯಾವುದೋ ಕಂಪನಿಯಲ್ಲಿ ಕೆಲಸಕ್ಕೆ ಸೇರಿಸಿ ತನ್ನ ಕುಟುಂಬದ ಹೊರೆಯನ್ನು ಹೊತ್ತರೆ ಸಾಕಾಗಿತ್ತೆ ಹೊರತು ಮಗಳ ಆಸೆ ಆಕಾಂಕ್ಷೆಗಳಿಗೆ ಬೆಲೆ ನೀಡುವ ಮನಸ್ಸು ಇರಲಿಲ್ಲ. ಆತ ಆ ಪರಿಸ್ಥಿತಿಯಲ್ಲೂ ಇಲ್ಲ. ಸಾರಂಗ ಪಾಣಿ ಮೊದಲಿಯರ್‌ರಿಂದ ಯಾರೋ ಹೆಣ್ಣು ಮಗಳು ಕೆಲಸಕ್ಕೆ ಹೋಗುತ್ತಿದ್ದಾಳೆಂಬ ಮಾತು ಕೇಳಿ ತನ್ನ ಮಗಳಿಗೂ ಅಂತಹ ಕೆಲಸ ಸಿಗಲಿ ಎಂಬ ಹಾರೈಕೆ ಗೋವಿಂದರಾಯರದಾಗಿತ್ತು. ಅದಕ್ಕಾಗಿ ಮೊದಲು ಹೆಂಡತಿ ಕಮಲಮ್ಮನವರ ಬಳಿ ಎಷ್ಟೇ ಬಿಡಿಸಿ ಹೇಳಿ, ಅಂಗಲಾಚಿದರೂ ಅದರ ಬಗ್ಗೆ ಯಾವುದೇ ಸಕಾರಾತ್ಮಕ ನಿರ್ಣಯ ತೆಗೆದುಕೊಳ್ಳದ ಹೆಂಡತಿಯ ಬಗ್ಗೆ ಕೋಪವನ್ನು ತಾಳಿ ಮುಂದೆ ಮಗಳು ಕೋಮಲಾಳ ಹತ್ತಿರವೇ ಈ ವಿಷಯದ ಬಗ್ಗೆ ಕೂಲಂಕಷವಾಗಿ ತಿಳಿಸಿ ಹೇಳಬೇಕೆಂದು, ಕನಕಮ್ಮನವರು ಮನೆಯಲ್ಲಿಲ್ಲದ ಸಮಯದಲ್ಲಿ ಗೋವಿಂದರಾಯರು ಮಗಳು ಕೋಮಲೆಯನ್ನು ಹತ್ತಿರದಲ್ಲಿ ಕೂರಿಸಿಕೊಂಡು ತುಂಬಾ ನಾಜೂಕಾಗಿ, ನುಣುಪು ನುಡಿಗಳಿಂದ ಆ ಟ್ರೈನಿಂಗ್ ತೆಗೆದುಕೊಂಡು ಕೆಲಸಕ್ಕೆ ಸೇರಿಕೊಳ್ಳಲು ವಿವಿಧ ರೀತಿಯಲ್ಲಿ ಹೇಳಿ ಅವಳನ್ನು ಒಪ್ಪಿಸುತ್ತಾನೆ. ಕೊನೆಗೆ ತಾಯಿ ಕನಕಮ್ಮ ಒಪ್ಪದಿದ್ದರೆ ಅವಳನ್ನು ಒಪ್ಪಿಸುವ ಜವಾಬ್ದಾರಿಯು ಕೋಮಲಾಳ ಹೆಗಲ ಮೇಲೆಯೇ ಬೀಳುತ್ತದೆ. ಇಲ್ಲೂ ಗಂಡಸಿನ ಬಣ್ಣದ ಮಾತುಗಳೇ ಮನ್ನಣೆ ಪಡೆಯುತ್ತವೆಯೇ ಹೊರತು ಕೋಮಲಾಳ ಮನಸ್ಸಿನ ಆಸಕ್ತಿಯನ್ನು ತಿಳಿಯುವ ಕಾರ್ಯವನ್ನು ಸಾಮಾಜಿಕ ಸಂರಚನೆಯಲ್ಲಿ ಧನಾತ್ಮಕವಾಗಿ ಮಾಡುವುದೇ ಇಲ್ಲ.

ಗೋವಿಂದರಾಯರು ಮಗಳನ್ನು ಒಪ್ಪಿಸುವ ಭರದಲ್ಲಿ ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳಲು, ಸಂಸಾರದ ನೊಗವನ್ನು ಮಗಳ ಹೆಗಲ ಮೇಲೆ ಹಾಕಿ ಬಿಡಲು ಹವಣಿಸುತ್ತಿದ್ದ ತಂದೆ ಗೋವಿಂದರಾಯರ ಮನಸ್ಸಲ್ಲಿ "ಎಷ್ಟು ಪೊಗರು ಈ ಲೌಡಿಗೆ? ಎಂಬ ರೋಷಾವೇಶವು ಮನಸ್ಸಿನಲ್ಲಿ ಕುದಿಯುತ್ತಿದ್ದರೂ ತನ್ನ ಕಾರ್ಯ ನೆರವೇರಬೇಕೆಂಬ ಒಂದೇ ಉದ್ದೇಶದಿಂದ ಸ್ತ್ರೀ ವಿರೋಧಿ ಧೋರಣೆಯನ್ನು ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ನೋಡಬಹುದು.

ಒಂದೊಮ್ಮೆ ಕೋಮಲಾ ತನ್ನ ತಾಯಿ ಕನಕಮ್ಮನವರ ಜೊತೆ ದೇವಸ್ಥಾನಕ್ಕೆ ಹೋಗಿದ್ದ ಸಂದರ್ಭದಲ್ಲಿ ಭಿಕ್ಷುಕ ಕುರುಡನು ತನ್ನ ಸತ್ತ ಮಗುವಿನ ಹೆಣವನ್ನು ಮುಂದಿಟ್ಟು ಗೋಳಿಡುತ್ತಾ ಭಿಕ್ಷೆಗಾಗಿ ಹಣ ಬೀಳಲೆಂದು ತನ್ನ ಹೆಂಡತಿಯನ್ನು ಜೋರಾಗಿ ಅಳಲು ಪ್ರೇರೇಪಿಸುವುದು. ಕೇವಲ ಹಣಕ್ಕಾಗಿಯೇ ಹೆಣ್ಣನ್ನು ತುಚ್ಛವಾಗಿ ಬಳಸಿಕೊಳ್ಳುವುದು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಮಾತಿಗೆ ಬೆಲೆಯಿಲ್ಲ ಎಂಬುದನ್ನು ತೋರಿಸುತ್ತದೆ.

ಗೋವಿಂದರಾಯರು ಮಗಳನ್ನು ಒಪ್ಪಿಸಿದ್ದು, ಮಗಳು ಒಪ್ಪಿದ್ದು ಹೆಂಡತಿ ಕನಕಮ್ಮನವರಿಗೆ ಸಹಿಸಿಕೊಳ್ಳಲಾಗಲಿಲ್ಲ. ಇಲ್ಲೂ ಕನಕಮ್ಮನವರು ತನ್ನ ಗೊಡ್ಡು ಸಂಪ್ರದಾಯದ ಜಾಡು ಹಿಡಿದು ಮಗಳನ್ನು ಕೆಲಸಕ್ಕೆ ಸೇರಿಸಲು ನಿರಾಕರಿಸುತ್ತಾಳೆಯೇ ವಿನಃ ಒಪ್ಪಿಗೆ ಸೂಚಿಸುವುದಿಲ್ಲ. ಇಲ್ಲೂ ತ.ರಾ.ಸು. ರವರು ಪುರುಷ ಪ್ರಧಾನ ಧೋರಣೆಯನ್ನು ಕೈಬಿಟ್ಟು ಕನಕಮ್ಮನವರ ಕೈಯಲ್ಲಿ ಕೋಮಲಾಳ ಕೆಲಸದ ವಿಷಯಕ್ಕೆ ಒಪ್ಪಿಗೆ ಸೂಚಿಸಬಹುದಿತ್ತು. ಈ ಮೂಲಕ ಪ್ರಗತಿಶೀಲ ಕಾದಂಬರಿಗಳು ಮಧ್ಯಮ ವರ್ಗದ ಸಮಸ್ಯೆಗಳನ್ನು ನಿರೂಪಿಸುತ್ತವೆಯೇ ವಿನಃ ಪರಿಹಾರ ಕಾರ್ಯಗಳನ್ನು ಸೂಚಿಸುವುದಿಲ್ಲ ಎಂಬ ಅಪವಾದದಿಂದ ಹೊರಬರಬಹುದಿತ್ತು. ಆ ಮೂಲಕ ಸ್ತ್ರೀ ವಿರೋಧಿ ಧೋರಣೆಯನ್ನು ಅಳಿಸಿ ಹಾಕಿ ಸಮಾನತೆಯ ಆಶಾಕಿರಣ ಹೊತ್ತಿಸಬಹುದಿತ್ತು. ಆದರೆ ಇಲ್ಲೂ ಅದು ಹುಸಿಯಾಗಿ ಕನಕಮ್ಮನವರು ಕೋಮಲಾಳ ಕೆಲಸದ ವಿಷಯಕ್ಕೆ ಒಪ್ಪಿಗೆ ಸೂಚಿಸುವುದೇ ಇಲ್ಲ. ಕೊನೆಗೆ ತಂದೆಯ ಮಾತಿಗೆ ಹ್ಞೂಗೊಟ್ಟು ಈಗ ತಾಯಿಯನ್ನು ಒಪ್ಪಿಸಿ ಸಂಸಾರದ ಹೊಣೆಯನ್ನು ಹೊರಲು ಸಿದ್ಧಳಾಗುತ್ತಿದ್ದಾಳೆ. ಇಲ್ಲಿ ಕೋಮಲಾಳ ಪಾತ್ರವು ಅದ್ಭುತವಾಗಿ ಮೂಡಿಬಂದಿದ್ದು ಹೆಣ್ಣು ಕೆಲಸಕ್ಕೆ ಹೋಗಬಾರದೆಂಬ ಕಟ್ಟಳೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿದ್ದರೂ ಪರಿಸ್ಥಿತಿಗೆ ಅನುಗುಣವಾಗಿ ನಿರ್ಧಾರವನ್ನು ತೆಗೆದುಕೊಳ್ಳುವುದು ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಶ್ಲಾಘನೀಯವಾದದ್ದು.

ಕೊನೆಗೆ ಕಂಪ್ಯೂಟರ್ ಟ್ರೈನಿಂಗ್‌ಗೆ ಮಗಳನ್ನು ಕಳುಹಿಸಲು ಒಪ್ಪಿದ ಕನಕಮ್ಮ ಮಗಳು ಕೋಮಲಾಗೆ ಹೇಳುವ ಬುದ್ಧಿಮಾತು ಆ ಕಾಲಕ್ಕೆ ಹೆಣ್ಣಿನ ಜೀವನದ ನೈಜ ಸ್ಥಿತಿಯನ್ನು ತಿಳಿಸುತ್ತದೆ. "ಹೆಣ್ಣಾಗಿ ಹುಟ್ಟಿ ವಯಸ್ಸಿಗೆ ಬಂದವರ ಪಾಲಿಗೆ ಸ್ಕೂಲು ಕಾಡು ಎರಡೂ ಒಂದೇ. ಹೆಣ್ಣು ತನ್ನ ಬುದ್ಧಿಯನ್ನು ಗಟ್ಟಿಗಿಟ್ಟುಕೊಂಡಿರಬೇಕು. ಈಗಿನ ಕಾಲದ ಗಂಡಸರು ಬೀದೀಲಿ ಓಡಾಡೋ ಹೆಂಗಸರನ್ನೆಲ್ಲಾ ಬಸವೀರು

ಎಂದು ತಿಳಿದಿರುತ್ತಾರೆ. ಇದು ಕಲಿಗಾಲ" ಈ ರೀತಿಯ ಮಾತುಗಳು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನಮಾನ, ಹೆಣ್ಣಿಗೆ ಸಮಾಜದಲ್ಲಿದ್ದ ಬೆಲೆ, ಏನೆಂದು ತಿಳಿಯುತ್ತದೆ. ಈ ಮೂಲಕ ಮಗಳು ಕೋಮಲಾಳು ಯಾವುದೇ ಕಾರಣಕ್ಕೂ ಕೈಜಾರಿ ಹೋಗಬಾರದೆಂದು, ತನ್ನ ಬುದ್ಧಿಯನ್ನು ಸ್ಥಿಮಿತದಲ್ಲಿಟ್ಟುಕೊಳ್ಳಬೇಕೆಂದು ಹೇಳುವ ಪರಿ ಭಾರತೀಯ ವ್ಯವಸ್ಥೆಯಲ್ಲಿ ಹೆಣ್ಣು ಹೊಸ್ತಿಲಿನಿಂದ ಹೊರಗೆ ಕಾಲಿಟ್ಟರೆ ಅದು ಗಂಡನ ಮನೆಗೆ ಹೋಗುವಾಗ ಮಾತ್ರ ಎಂಬ ಕಟ್ಟಳೆಯಿರುವಾಗ ಕೆಲಸಕ್ಕೆ ಹೆಣ್ಣು ಮಗಳನ್ನು ಸಾಮಾಜಿಕ ದೃಷ್ಟಿಯಲ್ಲಿ ಮಹಾಪರಾಧವೆಂಬಂತೆ ಕಂಡುಬಂದು ಅದು ಭಾರತೀಯ ಸಂಪ್ರದಾಯ, ಆಚಾರ-ವಿಚಾರಕ್ಕೆ ತದ್ವಿರುದ್ಧವಾಗಿರುವ ಅಂಶವೆಂಬಂತೆ ಬಿಂಬಿಸಿರುವುದು ಅಂದಿನ ಹೆಣ್ಣು ಮಕ್ಕಳು ಎಂಥ ಉಸಿರುಗಟ್ಟಿಸುವ ವಾತಾವರಣದಲ್ಲಿ ಬೆಳೆಯುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ಎಲ್ಲಾ ಭಾರತೀಯ ತಾಯಂದಿರ ಮನೋಧೋರಣೆಯು ಇದೇ ಸ್ಥಿತಿಯಲ್ಲಿದೆ. ಹಾಗೇ ನೋಡಿದರೆ ಇಂತಹ ಪರಿಸ್ಥಿತಿ ಇಂದಿಗೂ ಕಡಿಮೆಯಾಗಿಲ್ಲ. ಸ್ವಲ್ಪ ಮಟ್ಟಿಗೆ ಸುಧಾರಿಸಿದ್ದರೂ ಕೂಡಾ ಗ್ರಾಮೀಣ ಭಾರತದ ಹೆಣ್ಣುಮಕ್ಕಳ ಸ್ಥಿತಿಗತಿ ಇದಕ್ಕಿಂತ ಹೊರತಾಗಿಲ್ಲ.

ಇಲ್ಲಿ ಕೋಮಲಾಳ ತಾಯಿ ಹೇಳುವ ಬುದ್ಧಿವಾದವು ತನ್ನ ಮಗಳ ವ್ಯಕ್ತಿತ್ವದ ಬಗ್ಗೆ ನಂಬಿಕೆಯಿದ್ದರೂ, ಆಕೆಯ ವಯಸ್ಸಿನ ಮೇಲೆ ಯಾವುದೇ ನಂಬಿಕೆಯಿಲ್ಲದೆ ಹೇಳಿರಬಹುದು ಹಾಗೂ ಮಗಳು ವಯಸ್ಸಿನ ಕೋಲಾಹಲದಲ್ಲಿ ಹಾದಿ ತಪ್ಪಿ ಬಿಡಬಹುದೆಂಬ ಭಯದಲ್ಲಿ ಹೇಳಿರಬಹುದು ಹಾಗೆ ನೋಡಿದರೆ ಕೋಮಲಾಳ ಮನಸ್ಸು ಆಕೆಯ ಹೆಸರಿನಷ್ಟೇ ಕೋಮಲಾವಾಗಿದ್ದು ಆಕೆಯ ವ್ಯಕ್ತಿತ್ವವೇ ಅದನ್ನು ಸಾರಿ ಹೇಳುತ್ತದೆ. ಹಲವು ಬಾರಿ ಮದುವೆ ಪ್ರಸ್ತಾಪ ಬಂದಾಗಲೂ ಅಣ್ಣ ಗೋಪಾಲಕೃಷ್ಣ ಈ ಮೊದಲು ಹಲವು ಸಲ ರೇಗಿಸಿದಾಗಲೂ ನಾಚಿಕೆಯಿಂದ ತಲೆ ತಗ್ಗಿಸಿದ್ದಳೇ ವಿನಃ ಬೇರೆ ಯಾವುದೇ ಪ್ರತಿಕ್ರಿಯೆಯನ್ನು ನೀಡಿರಲಿಲ್ಲ.

ಮತ್ತೊಂದೆಡೆ ಕನಕಮ್ಮನವರು ತನ್ನ ಮಗಳ ಶೀಲದ ರಕ್ಷಣೆಯ ಬಗ್ಗೆ ಇಷ್ಟೊಂದು ಕಾಳಜಿ ಇಟ್ಟುಕೊಂಡರೆ? ಅವರಿಗೇನೂ ತನ್ನ ಹೆತ್ತ ಮಗಳ ಮೇಲೆಯೇ ನಂಬಿಕೆ ಇಲ್ಲವೇ? ಹೀಗೆ ಹಲವು ಪ್ರಶ್ನೆಗಳು ನಮ್ಮಲ್ಲಿ ಮೂಡಿದರೂ ಸಾಮಾನ್ಯವಾಗಿ ಭಾರತೀಯ ತಾಯಂದಿರು ಯೋಚಿಸುವ ಧಾಟಿಯಲ್ಲೆ ಅವರು ಯೋಚಿಸಿದ್ದರೇ ವಿನಃ ಅಲ್ಲಿ ಮತ್ತಾವುದೇ ದುರುದ್ದೇಶಗಳಿರಲಿಲ್ಲ.

ಈ ಮೂಲಕ ಅಂದಿನ ಭಾರತದ ಪುರುಷ ಪ್ರಧಾನ ವ್ಯವಸ್ಥೆಯ ಮನೋಸ್ಥಿತಿಯನ್ನೇ ಇಲ್ಲಿ ಹೇಳಿದ್ದಾರೆ. ಆದರೆ ತ.ರಾ.ಸು. ಅವರು ಇಲ್ಲಿ ಕನಕಮ್ಮನವರು ತಮ್ಮ ಮಗಳ ಶೀಲದ ಬಗ್ಗೆ ಅಷ್ಟೊಂದು ತಲೆಕೆಡಿಸಿಕೊಳ್ಳುವ ಅಗತ್ಯವಿರಲಿಲ್ಲ ಅದನ್ನು ಈ ಮಟ್ಟಕ್ಕೆ ಕಾದಂಬರಿಯಲ್ಲಿ ಸೂಚಿಸುವ ಅಗತ್ಯವಿರಲಿಲ್ಲ. ಕಾರಣ ಹುಟ್ಟಿನಿಂದ ಕೋಮಲಾಳ ವ್ಯಕ್ತಿತ್ವದ ಬಗ್ಗೆ, ಒಬ್ಬ ಹೆಣ್ಣಾಗಿ, ತಾಯಿಯಾಗಿ ಕನಕಮ್ಮನವರಿಗೆ ತುಂಬಾ

ಚೆನ್ನಾಗಿ ತಿಳಿದಿರುತ್ತದೆ. ಆದ್ದರಿಂದ ತ.ರಾ.ಸು.ರವರು ಇಲ್ಲಿ ಸೂಚ್ಯವಾಗೋ, ಒಂದು ಒಗಟಿನ ಮೂಲಕವೋ, ಸರಳವಾಗಿ ಕನಕಮ್ಮನವರ ಮೂಲಕ ಅಷ್ಟೊಂದು ಮಹತ್ವ ನೀಡದಂತೆ ಹೇಳಿಕೆಯನ್ನು ಹೇಳಿಸಬಹುದಿತ್ತು.

ಕೋಮಲಾಳು ತನ್ನ ತಂದೆಯ ಸುಪರ್ದಿಯಲ್ಲಿ ಕಂಪ್ಯೂಟರ್ ಟ್ರೈನಿಂಗ್ ಸೆಂಟರ್‌ಗೆ ಹೋಗಿ ತಾನು ತರಬೇತಿ ಪಡೆಯುವ ಸಮಯದಲ್ಲಿ ಅಲ್ಲಿ ಯಾರನ್ನೂ ಮಾತಾಡಿಸದೇ, ಸ್ನೇಹಿತರನ್ನಾಗಿ ಮಾಡಿಕೊಳ್ಳಲು ಆಕೆ ತಯಾರಿರಲಿಲ್ಲ. ಕಾರಣ ತನ್ನ ತಾಯಿ ಕನಕಮ್ಮ ಹೇಳಿದ ಮಾತಿನಂತೆ ಕಣ್ಗೆತ್ತಿ ನೋಡಿದರೆ ಎಲ್ಲಿ ಅಪಚಾರವಾಗುತ್ತದೋ ಎಂದು ತಾಯಿಯ ಮಾತನ್ನು ಶಿರಸಾವಹಿಸಿ ಪಾಲಿಸುತ್ತಾಳೆ. ಆದರೆ ಇದೇ ತರಬೇತಿ ಕೇಂದ್ರದಲ್ಲಿ ಮಣಿ ಎಂಬ ವ್ಯಕ್ತಿಯು ಈಕೆಯ ಮೇಲೆ ಕಣ್ಣು ಹಾಕಿ ತನ್ನೆಡೆ ಸೆಳೆಯಲು ಪ್ರಯತ್ನಿಸುತ್ತಾನೆ. ಆ ಮಣಿಯು ಕೋಮಲಾಳನ್ನು ರೇಗಿಸಲು 'ಸೆರಿಬ್ರಸ್' ಎಂಬ ಪದ ಬಳಕೆ ಮಾಡುತ್ತಾನೆ. ಸೆರಿಬ್ರಸ್ ಎಂದರೆ ನರಕದ ಬಾಗಿಲು ಕಾಯುವ ಮೂರು ತಲೆಗಳ ನಾಯಿ ಎಂದು ಅರ್ಥ. ಇದನ್ನು ಮಣಿಯು ಕೋಮಲಾ ಮತ್ತು ಆಕೆಯ ತಂದೆಯ ಕುರಿತೇ ಹೇಳಿದ್ದು. ಇದಕ್ಕೆ ಹೆಚ್ಚು ಕುಪಿತಳಾದ ಕೋಮಲೆ ಮಣಿಯ ಬಗ್ಗೆ ಹೆಚ್ಚಿನ ಸಿಟ್ಟನ್ನು ಹೊಂದಿರುತ್ತಾಳೆ. ಇದು ಸಾಮಾಜಿಕ ಸಂರಚನೆಯಲ್ಲಿ ಪುರುಷ ಪ್ರಧಾನ ಧೋರಣೆಯಾಗಿ ಕಾಣಿಸುತ್ತದೆ.

ಮಣಿಯ ನೋಟಕ್ಕೆ ತನ್ನ ತೀಕ್ಷ್ಣ ನೋಟ ಬೀರಿ ಅವನನ್ನು ತನ್ನ ಕಣ್ಣನೋಟದಿಂದಲೇ, ಉರಿಗಣ್ಣಿನಿಂದಲೇ ಸೋಲಿಸಬೇಕೆಂದು ನಿಶ್ಚಯಿಸಿ ಕೋಮಲಾಳು ಎಷ್ಟೇ ಕೆಂಡಗಣ್ಣಿನಿಂದ ನೋಡಿದರೂ ಸಹ ಈಕೆಯ ನೋಟವು ಮಣಿಯನ್ನು ಸೋಲಿಸಲಾಗಲೇ ಇಲ್ಲ. ಆಗ ಅವಳ ಮನದಲ್ಲಿ ದುಗುಡವೇರ್ಪಟ್ಟು ಮಣಿಯ ನೋಟಕ್ಕೆ ಸೋಲುತ್ತಿದ್ದೇನೆಯೇ ಎಂಬ ಅನುಮಾನವು ಮೂಡುತ್ತದೆ. ಈ ಮೂಲಕ ಆತನ ಪ್ರೇಮಮಯ ನೋಟಗಳ ಮುಂದೆ ನನ್ನ ಮನಸ್ಸು ಶರಣಾಯಿತೇ? ಎಂಬ ಅನುಮಾನವು ಮೂಡುತ್ತದೆ. ಈ ಮೂಲಕ ತನ್ನ ವಯಸ್ಸು ತನ್ನ ಮಾನಸಿಕ ಆಸೆಗಳಿಗೆ ಮನ್ನಣೆ ನೀಡುತ್ತಿದೆ ಎಂದು ಸಾಮಾಜಿಕ ಸಂರಚನೆಯ ಆಯಾಮದಲ್ಲಿ ಕಂಡುಕೊಳ್ಳಬಹುದು.

ನಂತರ ಕೋಮಲಾಳು ತಲೆಸುತ್ತಿ ಬಿದ್ದು ಹೋಗಿ ಮನೆಗೆ ಟ್ಯಾಕ್ಸಿಯಲ್ಲಿ ಬಂದ ನಂತರ ಟ್ಯಾಕ್ಸಿಗೆ ಹಣ ನೀಡಲು ತಂದೆ-ತಾಯಿ ಮಾಡುವ ನಾಟಕೀಯ ಸನ್ನಿವೇಶಗಳು ಕೋಮಲೆಗೆ ಒಂದು ಕ್ಷಣ ದಿಗ್ಭ್ರಮೆಯಾಗಿ ತಾನು ದುಡಿಯಬೇಕೆಂದು ಪುಸಲಾಯಿಸುವ ತಂದೆ-ತಾಯಿ ಈಗ ಕೇವಲ ಟ್ಯಾಕ್ಸಿಗೆ ಹಣ ನೀಡಲು ಮೀನಾಮೇಷ ಎಣಿಸುವುದು, ಹಣಕ್ಕಾಗಿ ಎಷ್ಟು ಬೆಲೆ ನೀಡುತ್ತಾರೆ. ಆದರೆ ಮಗಳ ಜೀವನದ ಕಾಳಜಿಯೇ ಇಲ್ಲವಲ್ಲ ಎಂಬ ಅರಿವಾಗುತ್ತದೆ.

ಒಟ್ಟಾರೆ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಕೋಮಲಾಳ ಪಾತ್ರವು ಮಧ್ಯಮ ವರ್ಗದ ಹೆಣ್ಣುಮಕ್ಕಳ ಪ್ರತಿನಿಧಿಯಾಗಿ, ಕುಟುಂಬ ಜವಾಬ್ದಾರಿಯನ್ನು ನಿಭಾಯಿಸುವ, ತನ್ನ ಜೀವನದ ಆಸೆ-

ಆಕಾಂಕ್ಷೆಗಳನ್ನು ತನ್ನಲ್ಲೆ, ಅದುಮಿಟ್ಟು ಕೊರಗುತ್ತಾ, ಸಾಂದರ್ಭಿಕವಾಗಿ ಅದನ್ನು ಹಾಡು, ಒಗಟು, ತನ್ನ ವರ್ತನೆಯಲ್ಲಿ ಹೊರಹಾಕುತ್ತಾ ಕಾಲ ದೂಡುತ್ತಿರುವ ಸಾಮಾನ್ಯ ಹೆಣ್ಣು ಮಗಳ ವ್ಯಥೆಯಾಗಿದೆ.

**4.1.2 : ಕನಕಮ್ಮ (ಪಂಜರದ ಪಕ್ಷಿ)**

ತ.ರಾ.ಸು. ರವರ 'ಪಂಜರದ ಪಕ್ಷಿ' ಸಾಮಾಜಿಕ ಕಾದಂಬರಿಯಲ್ಲಿ ಕಂಡುಬರುವ ಮತ್ತೊಂದು ಬಹುಮುಖ್ಯ ಪಾತ್ರ ಕನಕಮ್ಮನವರು. ಒಂದು ಹೆಣ್ಣಾಗಿ, ಹೆಂಡತಿಯಾಗಿ, ನಾಲ್ಕು ಮಕ್ಕಳ ತಾಯಿಯಾಗಿ ತಾನು ಅನುಭವಿಸಿದ ಕಷ್ಟಗಳ ಸರಮಾಲೆಯನ್ನು ನೆನಪಿಸಿಕೊಳ್ಳುತ್ತಾ, ಗೃಹಿಣಿಯಾಗಿ ತನ್ನ ಜವಾಬ್ದಾರಿಗಳನ್ನು ಅರಿತು ಬಹುಮುಖ್ಯವಾದ ಪಾತ್ರವನ್ನು ಈ ಕಾದಂಬರಿಯಲ್ಲಿ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ನಿರ್ವಹಿಸಿದ್ದಾಳೆ.

ಕಾದಂಬರಿಯ ಆರಂಭದಲ್ಲಿ ಮಗಳು ಕೋಮಲಾ ತನ್ನ ಆಫೀಸಿನಿಂದ ಬಂದ ನಂತರ ಮಗ ವಿಶ್ವನಾಥ ಅಕ್ಕನಿಗೆ ಕಥೆ ಹೇಳಲು ಒತ್ತಾಯಿಸಿದಾಗ, ಕೋಮಲಾಳು ತನ್ನ ಕಥೆಯನ್ನೇ ಅವನಿಗೆ ಮಾರ್ಮಿಕವಾಗಿ ಹೇಳಲು ಆರಂಭಿಸುತ್ತಾಳೆ. ಆಗ ಮಗ ವಿಶ್ವನಾಥನಿಗೆ ಏಟನ್ನು ಕೊಟ್ಟು ಮಗಳ ಮನದಾಸೆಯನ್ನು ಅರಿತುಕೊಂಡು, ಆದರೆ ಆ ಆಸೆಯನ್ನು ಈಡೇರಿಸುವ ಸ್ಥಿತಿಯಲ್ಲಿ ತಾವಿಲ್ಲ ಎಂಬ ಸತ್ಯವನ್ನು ಅರಿತು ತನ್ನ ನೋವನ್ನು ತನ್ನ ಕಣ್ಣೀರಿನ ಮೂಲಕ ತೋರ್ಪಡಿಸುತ್ತಾಳೆ. ಈ ಮೂಲಕ ತಾಯಿಯ ಅಂತಃಕರಣದ ಅರಿವು ತಿಳಿಯುತ್ತದೆ. ಮಗಳ ಅಂತಃಕರಣವನ್ನು ತಿಳಿದಿರುವ ತಾಯಿ ಮಗಳಿಗೋಸ್ಕರ ಏನನ್ನೂ ಮಾಡಲಾಗದ ಸ್ಥಿತಿಯಲ್ಲಿ ತಾನಿದ್ದೇನೆ ಎಂಬ ಕೊರಗು ಕನಕಮ್ಮನವರಲ್ಲಿ ಮನೆ ಮಾಡಿದೆ. ಈ ಮೂಲಕ ತಾಯಿಯ ಮಹತ್ವವನ್ನು ಭಾರತೀಯ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮನವರಿಕೆ ಮಾಡುತ್ತಾ ಸಾಮಾಜಿಕ ಸಂರಚನೆಯ ಆಯಾಮಕ್ಕೆ ಬಹುಮುಖ್ಯವಾದ ಓಘವನ್ನು ನೀಡಿದೆ.

ಕನಕಮ್ಮ ಅವರಿಗೆ ಮಗ ಗೋಪಾಲಕೃಷ್ಣ ಎಂದರೆ ಬಲು ಪ್ರೀತಿ. ಇದನ್ನು ಅವರು ಹಲವು ಸಂದರ್ಭಗಳಲ್ಲಿ ವ್ಯಕ್ತಪಡಿಸಿದ್ದಾಳೆ. ಗಂಡ ಗೋವಿಂದರಾಯರು ಮಗನ ಭವಿಷ್ಯದ ಬಗ್ಗೆ ಅನುಮಾನಿಸುತ್ತಾ ಮಾತನಾಡಿದಾಗ ಅದನ್ನು ನಿರಾಕರಿಸಿ ಮಗನ ಪರವಾಗಿಯೇ ವಾದಿಸಿದ್ದಳು. ಏನೆಂದರೂ ಮಾತೃ ಹೃದಯವಲ್ಲವೇ? ಹಾಗೆಯೇ ಮಗನು ಸಹ ತಾಯಿಯ ಆಶೋತ್ತರಗಳನ್ನು ಈಡೇರಿಸುವನಂತೆಯೇ ಬೆಳೆಯುತ್ತಾ ಹೋದ. ಒಮ್ಮೆ ಅವನು ಹಾಡುಗಾರಿಕೆಯಲ್ಲಿ ಬೆಳ್ಳಿ ಪದಕ ಬಂದಾಗ ತಂದೆ ಪ್ರೋತ್ಸಾಹಿಸಿರದಿದ್ದರೂ ತಾಯಿ ಕನಕಮ್ಮನವರು ಆ ವಿಷಯದ ಎಳ್ಳಷ್ಟು ತಿಳಿದಿರದಿದ್ದರೂ ಮಗನನ್ನು ಹೊಗಳಿ ಅಟಕ್ಕೆ ಏರಿಸಿದ್ದರು. ಗೋಪಿಟ್ಟಿಯು ತಾನು ಬೇಂದ್ರೆಯವರ ಪದ್ಯ ಹೇಳಿ ಬಹುಮಾನ ಗಳಿಸಿದೆ ಎಂದರೆ ತಾಯಿ ಕನಕಮ್ಮ ಅಂಥ ಹೆಸರನ್ನು ಮನುಷ್ಯರು ಇಟ್ಟುಕೊಳ್ಳುತ್ತಾರೆಯೇ ಎಂದು ಆಶ್ಚರ್ಯ

ವ್ಯಕ್ತಪಡಿಸಿದ್ದಳು. ಅಂದರೆ ತಾಯಿಯ ಮುಗ್ಧತೆಯು ಯಾವ ಮಟ್ಟದಲ್ಲಿದೆ, ಆದರೂ ಮಗನ ಸಾಧನೆಗೆ ತಾಯಿ ಹರ್ಷವನ್ನು ವ್ಯಕ್ತಪಡಿಸುತ್ತಾಳೆ.

ಆದರೆ ಮಗ ಗೋಪಾಲಕೃಷ್ಣನು ತಂಗಿ ಕೋಮಲೆಯನ್ನು ಶೈಕ್ಷಣಿಕವಾಗಿ ಹೆಚ್ಚು ಓದಿಸಬೇಕು ಎಂದಾಗ ಇದೇ ತನ್ನ ಮಗನ ಮಾತನ್ನೇ ಧಿಕ್ಕರಿಸುತ್ತಾಳೆ. ಕಾರಣ ಕನಕಮ್ಮನಿಗೆ ಮಗಳು ಮದುವೆ ಮಾಡಿಕೊಂಡು ಗಂಡನ ಮನೆಯಲ್ಲಿ ಸುಖವಾಗಿ ಇರಬೇಕೆಂಬ ಬಯಕೆ. ಇಲ್ಲಿ ತಾಯಿಯು ತನ್ನ ಮಗಳ ಆಸೆಗಳಿಗೆ ಪ್ರತಿರೋಧ ಒಡ್ಡಿದಳೆಂಬ ಅಪವಾದ ಬಂದರೂ ಭಾರತದ ಮಧ್ಯಮ ವರ್ಗದ ಕುಟುಂಬದ ತಾಯಿಯನ್ನು ಪ್ರತಿನಿಧಿಸಿ ತಾನು ಹಾಗೆಯೇ ಮಾಡಬೇಕೆನ್ನುತ್ತಾಳೆ. ಅವೆಲ್ಲಕ್ಕಿಂತ ಮಿಗಿಲಾಗಿ ಹೆಣ್ಣಿನ ಬಗೆಗಿದ್ದ ತಾರತಮ್ಯ ಧೋರಣೆ ಇಲ್ಲಿ ಕಂಡರೂ ಒಬ್ಬ ತಾಯಿಯಾಗಿ ಹೇಗೆ ಯೋಚಿಸಬೇಕೋ ಕನಕಮ್ಮನವರು ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಹಾಗೆಯೇ ಯೋಚಿಸಿದ್ದಾರೆ.

ಕನಕಮ್ಮನಿಗೆ ಈಗಿರುವ ಬದುಕಿನ ಕತ್ತಲೆ ಮುಂದೆ ಗೋಪಾಲಕೃಷ್ಣನ ದುಡಿಮೆಯ ಮೂಲಕ ಎಲ್ಲವೂ ಅಂತ್ಯವಾಗಿ ಬದುಕಿನಲ್ಲಿ ಬೆಳ್ಳಿಕಿರಣಗಳು ಮೂಡಬಹುದೆಂಬ ಮಹದಾಸೆಯಲ್ಲಿದ್ದ ತಾಯಿಗೆ ಬಂದದ್ದು ಮಗನ ಸಾವಿನ ಸುದ್ಧಿ. ಈ ಮೂಲಕ ಬದುಕಿನ ಆಶಾಕಿರಣವೆಲ್ಲಾ ಕರಗಿ ಹೋಗಿ ಗಾಢಾಂಧಕಾರದಲ್ಲಿ ಮುಳುಗುವ ಪರಿಸ್ಥಿತಿ ಎದುರಾಯಿತು. ಮಗನ ಸಾವಿನ ಸುದ್ಧಿ ಬರಸಿಡಿಲಂತೆ ಎರಗಿ ಬದುಕಿನ ಆಶಾಗೋಪುರವೇ ಕಳಚಿ ಹೋದಾಗ ತಾಯಿಯ ಸಂಕಟ ಹೇಳತೀರದು. ಇಲ್ಲಿ ಕನಕಮ್ಮನವರು ಮುಂದೆ ಸಾಗಿಸಬೇಕಾದ ಅನಿವಾರ್ಯ ಇರಬೇಕಾದರೆ ಮಗನ ಸಾವಿನ ನೋವನ್ನು ನುಂಗಿ ಭವಿಷ್ಯದ ಬದುಕಿನ ಬಂಡಿಗೆ ಚಕ್ರವಾಗುತ್ತಾಳೆ ಕನಕಮ್ಮ. ಇದು ತಾಯಿಯ ಮಾತೃಪ್ರೇಮ ಬದುಕಿನ ಅನಿವಾರ್ಯತೆ. ಅದರ ನಿರ್ವಹಣೆ ಮಾಡುವ ಜರೂರು ಇರುವಾಗ ಬದುಕಿನ ರಥವನ್ನು ಎಳೆಯು ಊರುಗೋಲಾಗಿ ಕಾಣಿಸುತ್ತಾಳೆ. ಸಾಮಾಜಿಕ ಸಂರಚನೆಯಲ್ಲಿ ಕನಕಮ್ಮನ ಪಾತ್ರ ಬಹಳ ಅರ್ಥಪೂರ್ಣ ಮತ್ತು ಅನಿವಾರ್ಯ.

ಹಾಗೆಯೇ ಕನಕಮ್ಮನ ಮದುವೆ ಪ್ರಸಂಗದಲ್ಲಿ ಆಕೆಯನ್ನು 'ಪುಣ್ಯವಂತೆ' ಎಂದು ಎಲ್ಲರೂ ಕರೆಯುತ್ತಿದ್ದರು. ಕಾರಣ ನಾಲ್ಕಾರು ಹೆಣ್ಣುಮಕ್ಕಳೊಂದಿಗೆ ಹುಟ್ಟಿದ ಬಡತನದ ಸಂಸಾರದಲ್ಲಿ ಮೂರನೆಯ ಹೆಣ್ಣಾಗಿ ಹುಟ್ಟಿದ ಕನಕಮ್ಮನ ಮದುವೆ ಹೇಗಾಗುತ್ತದೋ ಎಂಬ ಭಯ ಎಲ್ಲರಲ್ಲೂ ಇರುವಾಗ ತನ್ನ ಕನ್ಯಾಸೆರೆಯನ್ನು ಬಿಡಿಸಲು ಗೋವಿಂದರಾಯ ಎಂಬ ವರ ತನಗೇ ಗಂಡನಾಗಿ ಬಂದೇ ಬಿಟ್ಟ. ಆರಂಭದಲ್ಲಿ "ಪುಣ್ಯವಂತೆ" ಎಂಬ ಹಣೆಪಟ್ಟಿಯನ್ನು ಹೊತ್ತಿದ್ದ ಕನಕಮ್ಮನಿಗೆ ತಾನೊಬ್ಬ 'ಪಾಪಿಷ್ಠೆ' ಎಂಬ ಅರಿವು ಆಗಲು ಬಹಳ ದಿನ ಹಿಡಿಯಲಿಲ್ಲ. ಕಾರಣ ತನ್ನ ತಂಗಿ ಗೋದಾವರಿಯ ಗಾಂಧಾರಿಯಂತೆ ಮಕ್ಕಳನ್ನು ಹಡೆಯುತ್ತಾ ಹೋದದ್ದು ಅವಳಿಗೆ ಸಹ್ಯವೆನಿಸಲೇ ಇಲ್ಲ ಮತ್ತು "ಇದೇನು ಮಕ್ಕಳ ಪಿಡುಗೆ ಈ ಗೋದಾವರಿಗೆ?" ಎಂದು ಹಲವು ಬಾರಿ ಮೂಗು ಮುರಿದಿದ್ದಳು. ಆಗ ತಾಯಿ ಭಾಗ್ಯಮ್ಮ "ಎಲ್ಲರೂ ಬಾಳೆಯ ಗಿಡ ಹಾಗೇ ಇರೋದಿಲ್ಲ, ಹಲಸಿನ ಮರದ ಜಾತಿಯೋರು ಇರ್ತಾರೆ. ತಾಯಂದಿರು, ಮಕ್ಕಳು ಸಾಕೆಂದರೆ ಈ ಜಗತ್ತು

ಉಳಿಯೋದು ಹೇಗೆ, ಬೆಳೆಯೋದು ಹೇಗೆ ಎಂದಿದ್ದರು" ಅಂದರೆ ಮಕ್ಕಳು ದೇವರ ಪ್ರಸಾದ. ಈ ಜಗತ್ತನ್ನು ಬೆಳಗಲು, ಬೆಳೆಸಲು ಮಕ್ಕಳನ್ನು ಹಡೆಯುತ್ತಿರಬೇಕೆಂಬ ಸಮರ್ಥನೆ ಅಂದಿನ ಮಧ್ಯಮ ವರ್ಗದ ಕುಟುಂಬದಲ್ಲಿ ಸಾಮಾಜಿಕ ಸಂರಚನೆಯ ಆಯಾಮದಲ್ಲಿ ಸಮರ್ಥನೀಯವಾದ ವಿಚಾರವೇ ಆಗಿದೆ.

ಮೇಲಿನ ವಿಚಾರಕ್ಕೆ ಸಂಬಂಧಿಸಿದಂತೆ ತಂಗಿ ಗೋದಾವರಿಯು ಮಕ್ಕಳನ್ನು ಹಡೆಯುತ್ತಿರುವುದರಿಂದ ದೈಹಿಕವಾಗಿ ಆಕೆಗೆ ತೊಂದರೆಯಾಗಬಹುದೆಂದು ಯೋಚಿಸಿದ ಕನಕಮ್ಮನವರಿಗೆ ಭವಿಷ್ಯದಲ್ಲಿ ತಾನು ನಾಲ್ಕೈದು ಮಕ್ಕಳ ತಾಯಿಯಾಗುವೆನೆಂಬ ಅರಿವೆ ಇರಲಿಲ್ಲವೇನೋ? ಅಂದರೆ ವಿಧಿಯ ಕೈವಾಡದ ಮುಂದೆ ಮನುಷ್ಯನ ಯಾವುದೇ ಆಟವು ನಡೆಯುವುದಿಲ್ಲ. ತನ್ನ ಮಗ ಗೋಪಾಲಕೃಷ್ಣನ ಮರಣಾನಂತರ ತನ್ನ ಗಂಡ ಗೋವಿಂದರಾಯರ ಮತ್ತೊಂದು ಗಂಡು ಮಗುವಿನ ವ್ಯಾಮೋಹದಿಂದ ನಿರಂತರವಾಗಿ ಮೂರು ಹೆಣ್ಣು ಮಕ್ಕಳಾದುದು ವಿಧಿಯ ಕೈವಾಡವೇ. ಮಗ ಸತ್ತ ನಂತರ ಆ ಕೊರಗಿನಲ್ಲಿದ್ದ ಕನಕಮ್ಮಳು ಗಂಡನ ತೋಳ ತೆಕ್ಕೆಯ ಬಿಸಿಗೆ ಕರಗಿ ನುಂಗಲೂ ಆಗದ ಉಗುಳಲೂ ಆಗದ ಬಿಸಿ ತುಪ್ಪದ ಪರಿಸ್ಥಿತಿಯಲ್ಲಿ ಗಂಡು ಮಗನ ವ್ಯಾಮೋಹಕ್ಕೆ ನೀರೆರೆದಳು.

ಕನಕಮ್ಮ ಗೋವಿಂದರಾಯರು ಒಟ್ಟುಗೂಡಿದ ಫಲವಾಗಿ ಮತ್ತೆರಡು ಹೆಣ್ಣು ಮಕ್ಕಳು ಆನಂದಿ, ಸಾವಿತ್ರಿ ಜನಿಸಿದರು. ಈಗಾಗಲೇ ಕಿತ್ತು ತಿನ್ನುತ್ತಿದ್ದ ಬಡತನದಲ್ಲಿದ್ದ ಕನಕಮ್ಮಳ ಕುಟುಂಬಕ್ಕೆ ಬದುಕೇ ಇವೆರಡೇ ನೋಡುತ್ತಾ ಗಹಗಹಿಸಿ ನಗುತ್ತಿತ್ತು. ಅಂದರೆ ಗಂಡು ಮಗುವಿನ ವ್ಯಾಮೋಹಕ್ಕಾಗಿ ಮಾಡಿದ ಪ್ರಯತ್ನಗಳೆಲ್ಲಾ ನಿಷ್ಫಲವಾಯಿತು. ಇದು ನೇರಾನೇರ ಪುರುಷ ಪ್ರಧಾನ ವ್ಯವಸ್ಥೆಯನ್ನು ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಕಾಣಬಹುದು. ಹೆಣ್ಣನ್ನು ನಿಕೃಷ್ಟವಾಗಿಸಿ ಗಂಡಿಗಾಗಿ ಹಾತೊರೆಯುವ, ವಂಶೋದ್ಧಾರಕನೇ ಬೇಕೆಂದು ಅಂದಿನ ಪುರುಷ ಪ್ರಧಾನ ಸಮಾಜವು ಹೆಣ್ಣಿಗೆ ನೀಡಿದ ಸ್ಥಾನಮಾನವನ್ನು ತೋರಿಸುತ್ತದೆ. ಮತ್ತೊಂದೆಡೆ ಕನಕಮ್ಮಳಿಗೆ ಮಕ್ಕಳನ್ನು ಹೆತ್ತು ಸಾಕಾಗಿ ಹೋಗಿದ್ದರೆ ವಂಶೋದ್ಧಾರಕನ ನೆಪ ಒಡ್ಡಿ ಗೋವಿಂದರಾಯರು ತನ್ನ ತೋಳ ತೆಕ್ಕೆಯಲ್ಲಿ ತನ್ನ ಹೆಂಡತಿಯನ್ನು ಬಂಧಿಯಾಗಿಸಲು ಪ್ರಯತ್ನಿಸುವುದು ತನ್ನ ಕಾಮದಾಹದ ತೀವ್ರತೆಯನ್ನೇ ತೋರಿಸುತ್ತದೆ. ಹೆಣ್ಣನ್ನು ಕಾಮದಾಹಕ್ಕೆ ಬಳಸಿಕೊಳ್ಳುವ, ಮಕ್ಕಳನ್ನು ಹೆರುವ ಯಂತ್ರ ಎಂದು ಭಾವಿಸಿ ಗಂಡು ತನ್ನ ಮನೋಧೋರಣೆಯನ್ನು ಹೆಣ್ಣಿನ ಮೇಲೆ ಹೇರುವ ಸಾಮಾಜಿಕ ಸಂರಚನೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಧೋರಣೆ ಕಂಡುಬರುತ್ತದೆ.

ಗೋವಿಂದರಾಯರ ಖಾಯಿಲೆಯ ಹಿನ್ನೆಲೆಯಲ್ಲಿ ಅವರನ್ನು ಕೆಲಸಕ್ಕೆ ಸೇರಿಸಿಕೊಳ್ಳದೇ ಅವರ ಪೆನ್ಷನ್ ಹಣವನ್ನು ನೀಡಿ ಮನೆಗೆ ಕಳುಹಿಸಿದರು. ಒಂದೆಡೆ ತನ್ನ ಕೆಲಸ ಹೋಯಿತೆಂಬ ಚಿಂತೆ. ಮತ್ತೊಂದೆಡೆ ಆ ಹಣದಲ್ಲಿ ಮಗಳ ಮದುವೆಯನ್ನು ಮಾಡಬೇಕೆಂಬ ಯೋಚನೆಯನ್ನು ಕನಕಮ್ಮಳು ಮಾಡಿರುತ್ತಾಳೆ. ಇದಕ್ಕೆ ಗೋವಿಂದರಾಯರು ಕೋಪಿಸಿಕೊಂಡು ಈ ಹಣವಿಲ್ಲದಿದ್ದರೆ ಮನೆಯವರೆಲ್ಲಾ ಸೇರಿ ಮಣ್ಣನ್ನು

ತಿನ್ನಬೇಕಾಗುತ್ತದೆ ಎನ್ನುತ್ತಾನೆ. ಇಲ್ಲಿ ಮದುವೆಯ ವಯಸ್ಸಿಗೆ ಬಂದ ಮಗಳಿಗೆ ಮದುವೆ ಮಾಡಿಸಿ ಸಮಾಜದಲ್ಲಿನ ಆಡುವವರ ಬಾಯಿಗೆ ಆಹಾರವಾಗಬಾರದೆಂಬ ಯೋಚನೆ ಕನಕಮ್ಮಳದು. ಎಲ್ಲಾ ತಾಯಂದಿರು ಯೋಚನೆ ಮಾಡುವ ಹಾಗೆಯೇ ಕನಕಮ್ಮ ಕೋಮಲೆಯ ಮದುವೆಯ ಬಗ್ಗೆ ಯೋಚಿಸಿರುತ್ತಾಳೆ. ಏಕೆಂದರೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೆ ಎಷ್ಟೇ ಚಿಕ್ಕ ವಯಸ್ಸಿದ್ದರೂ ಕೂಡಾ ಮೈನೆರೆದಳೆಂದರೆ ಮದುವೆ ಮಾಡಿಲ್ಲವೆಂದರೆ ಎಲ್ಲರೂ ಆಡಿಕೊಳ್ಳುತ್ತಾರೆ. ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಹೆಣ್ಣಿಗೆ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವುದೇ ಆದ್ಯ ಕರ್ತವ್ಯವೆಂಬ ನಂಬಿಕೆಯಲ್ಲಿ ಅಂದಿನ ಸಮಾಜವಿತ್ತು.

ಮುಂದೆ ಗೋವಿಂದರಾಯರು ಮಗಳನ್ನು ಕೆಲಸಕ್ಕೆ ಕಳುಹಿಸಬೇಕೆಂಬ ಯೋಚನೆಯನ್ನು ಮಾಡಿ ಈ ವಿಷಯವನ್ನು ಹೆಂಡತಿ ಕನಕಮ್ಮಳ ಬಳಿ ಚರ್ಚಿಸಿದಾಗ ಅದು ಬಹುದೊಡ್ಡ ಅಪರಾಧವೆಂದು ಭಾವಿಸಿ ಅದಕ್ಕೆ ಸುತಾರಾಂ ಒಪ್ಪುವುದಿಲ್ಲ. ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಕಟ್ಟಳೆಗಳಿಗೆ ಹೆದರಿ ಮಗಳಿಗೆ ಮದುವೆ ಮಾಡಿಸುವ ಯೋಚನೆಯಲ್ಲಿರುತ್ತಾಳೆಯೇ ಹೊರತು ಮಗಳನ್ನು ಕೆಲಸಕ್ಕೆ ಕಳುಹಿಸುವುದು ನಾವೇ ಆಕೆಯನ್ನು ಹಾಳು ಬಾವಿಗೆ ತಳ್ಳಿದಂತೆ ಎಂದು ಭಾವಿಸಿದ್ದಳು. ತನ್ನ ಗಂಡನಿಗೆ ಇಂಥ ಮಾಡನಾಡಲು ನಾಚಿಕೆಯಾಗುವುದಿಲ್ಲವೇ ಎಂದು ದಬಾಯಿಸಿದ್ದಳು. ಇಲ್ಲಿ ಕನಕಮ್ಮಳು ತನ್ನ ಸಂಸಾರ ಹೇಗೆ ಹಾಳಾದರೂ ಪರವಾಗಿಲ್ಲ ಎಂದು ಹೇಳಿಸಿದ್ದರೂ ಮಗಳ ಮದುವೆ ವಿಷಯವೇ ದೊಡ್ಡದಾಗಿ ಬಿಂಬಿಸಿದ್ದು ಒಬ್ಬರ ಸುಖಕ್ಕಾಗಿ ಹತ್ತಾರು ಮಂದಿ ಕಷ್ಟಪಟ್ಟಂತೆ. ಇಲ್ಲಿ ಕನಕಮ್ಮ ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಮಗಳ ಮದುವೆ ವಿಷಯವನ್ನು ಮುಂದಿಟ್ಟು ಇಡೀ ಕುಟುಂಬವನ್ನು ಹಸಿವೆಯೆಂಬ ಬಾವಿಗೆ ತಳ್ಳುವುದು ಯಾವ ನ್ಯಾಯ? ಅದು ಉಚಿತವಲ್ಲ. ಹಾಗೆಯೇ ಕೋಮಲೆಯು ಕಂಪ್ಯೂಟರ್ ತರಬೇತಿಗೆಂದು ಹೊರಟಾಗ ಕನಕಮ್ಮಳು ಮಗಳಿಗೆ ಪುರುಷ ಪ್ರಧಾನ ವ್ಯವಸ್ಥೆಯ ಕರಾಳ ಕಥೆಯನ್ನು ಹೇಳುವ ಮೂಲಕ ಹೆಣ್ಣು ಒಂದು ಸಣ್ಣ ತಪ್ಪು ಮಾಡಿದರೂ ಅದು ಸಮಾಜದಲ್ಲಿ ಮಹಾ ಅಪರಾಧವೆಂಬಂತೆ ಬಿಂಬಿಸುತ್ತಾರೆ. ಅದೇ ಗಂಡು ಎಂಥ ದೊಡ್ಡ ತಪ್ಪನ್ನು ಮಾಡಿದರೂ ಸಮಾಜದ ದೃಷ್ಟಿಯಲ್ಲಿ ಅದೇ ತಪ್ಪೇ ಎನಿಸಿಕೊಳ್ಳುವುದಿಲ್ಲ. ಭಾರತೀಯ ಸಾಮಾಜಿಕ ಸಂರಚನೆಯ ಆಯಾಮದಲ್ಲಿ ಅದು ಅಡಕವಾಗಿದೆ. ಒಬ್ಬ ತಾಯಿ ತನ್ನ ಮಗಳಿಗೆ ಹೇಳುವ ಸಾಮಾನ್ಯ ಬುದ್ಧಿವಾದವನ್ನು ಇಲ್ಲಿ ಕನಕಮ್ಮಳು ಕೋಮಲೆಗೆ ಹೇಳುವಂಥದ್ದು. ಒಂದೆಡೆ ತನ್ನ ಮಗಳನ್ನೆ ತನ್ನ ತಾಯಿ ನಂಬುವುದಿಲ್ಲವೇ? ಎಂದು ಕನಕಮ್ಮಳನ್ನು ಟೀಕಿಸಿದರೂ ಕೂಡ ಕೋಮಲೆಯ ವ್ಯಕ್ತಿತ್ವವು ತುಂಬಾ ಚೆನ್ನಾಗಿ ತಿಳಿದಿದ್ದರೂ ಅವಳ ವಯಸ್ಸಿನ ಮೇಲೆ ಬಹುಶಃ ನಂಬಿಕೆಯಿಲ್ಲದೇ ಒಬ್ಬ ತಾಯಿಯ ಮಾನಸಿಕ ತುಗುಡ. ಒಂದು ರೀತಿಯ ಅಳುಕು ಆವರಿಸಿ ಮಗಳಿಗೆ ಅಲ್ಲಿಗೆ ಹೋಗುವ ಮೊದಲು ಬುದ್ಧಿವಾದವನ್ನು ಹೇಳುತ್ತಾಳೆ.

ಒಂದೊಮ್ಮೆ ಮಗನಿದ್ದಾಗ ತನ್ನ ತಂಗಿ ಕೋಮಲಾ ಹಾಡಿದ ಹಾಡನ್ನು ಮೆಚ್ಚಿ ಪ್ರೋತ್ಸಾಹಿಸಿ ಅವಳಿಗೆ ಸಂಗೀತವನ್ನು ಕಲಿಸಬೇಕು. ಆಕೆ ಎಂ.ಎಸ್. ಸುಬ್ಬಲಕ್ಷ್ಮಿಯವರ ಥರವೇ ಹಾಡುತ್ತಾಳೆ. ಕೋಮಲೆಗೆ ಸಂಗೀತಾಭ್ಯಾಸ ಮಾಡಿಸಬೇಕು ಎಂದು ಗೋಪಾಲಕೃಷ್ಣ ತಾಯಿಯ ಬಳಿ ಹೇಳಿದಾಗ ತಾಯಿ ನೀಡುವ ಉತ್ತರ ಸೌಟು ಹಿಡಿಯುವ ಕಥಗೆ ಹಾರ್ಮೋನಿಯಂ ನೀಡಬಾರದು, ಹೆಣ್ಣು ಸಂಗೀತವನ್ನೆಲ್ಲಾ ಕಲಿಯುವಂತಿಲ್ಲ. ಹೆಣ್ಣು ಅಡುಗೆ ಮನೆಯ ಒಡತಿ, ಅಡುಗೆ ಮನೆಯಲ್ಲಿ ಚಾಕರಿ ಮಾಡುವವಳು ಎಂದು ಭಾರತೀಯ ಅಮ್ಮಂದಿರು ಯೋಚಿಸುವಂತೆ ಕೋಮಲೆ ಸಂಗೀತವನ್ನು ಕಲಿಯಲು ಹೋದರೆ ಸೌಟಿನಲ್ಲಿ ಹೊಡೆಯುವುದಾಗಿ ಹೇಳುತ್ತಾಳೆ. ಇಲ್ಲಿ ಕನಕಮ್ಮಳು ಕೇವಲ ಒಂದು ವಿಷಯಕ್ಕೆ ಅಂಟಿಕೊಂಡಿದ್ದು ಅದನ್ನು ಬಿಟ್ಟು ಹೊರಬರುತ್ತಿಲ್ಲ. ತ.ರಾ.ಸು. ಈ ಕಾದಂಬರಿಯಲ್ಲಿ ಕನಕಮ್ಮರ ಪಾತ್ರವನ್ನು ಹೆಣ್ಣಿನ ಆಶೋತ್ತರಕ್ಕೆ ಸ್ಪಂದಿಸದೆ ತನ್ನ ಮಗಳ ಆಸೆಗಳಿಗೆ ಮನ್ನಣೆ ನೀಡದ ತಾಯಿಯಾಗಿ ಸೃಷ್ಟಿಸಿದ್ದಾರೆ. ಅವರ ಜೀವನದ ಪ್ರಮುಖ ಗುರಿಯೇ ಕೋಮಲೆಗೆ ಮದುವೆ ಮಾಡಿಸುವುದು. ಒಂದು ವೇಳೆ ಈ ಪಾತ್ರವನ್ನು ಮಗಳಿಗೆ ಸ್ವಾತಂತ್ರ್ಯ ನೀಡುವ ಮೂಲಕ ಸಾಮಾಜಿಕವಾದ ಕಟ್ಟಳೆಗಳಿಗೆ ಸೆಡ್ಡು ಹೊಡೆದು ಮುಂದಿನ ಅಥವಾ ಭವಿಷ್ಯದಲ್ಲಿನ ಹೆಣ್ಣು ಮಕ್ಕಳಿಗೆ ಕೋಮಲೆ ಪಾತ್ರಧಾರಿಯ ಮೂಲಕ ಕಾದಂಬರಿ ಕ್ಷೇತ್ರದಲ್ಲಿ ಅದರಲ್ಲೂ ಪ್ರಗತಿಶೀಲ ಸಾಹಿತ್ಯದಲ್ಲಿ ಬರುವ ಹಲವು ಸ್ತ್ರೀ ಪಾತ್ರಗಳು ಇದೇ ಮಾದರಿಯಲ್ಲಿ ಸಾಗುತ್ತದೆ.

ತ.ರಾ.ಸು.ರವರು ಕನಕಮ್ಮ ಅವರ ಪಾತ್ರವನ್ನು ಸ್ವಲ್ಪ ಭಿನ್ನವಾಗಿ ಸೃಷ್ಟಿಸಿದ್ದರೆ ಭವಿಷ್ಯದಲ್ಲಿ ಪ್ರಗತಿಶೀಲ ಸಾಹಿತಿಗಳು ರಚಿಸಿದ ಹಲವು ಕಾದಂಬರಿಳಿಗೆ ದಾರಿದೀಪವಾಗುತ್ತಿತ್ತು.

ಒಟ್ಟಾರೆ 'ಪಂಜರದ ಪಕ್ಷಿ' ಕಾದಂಬರಿಯಲ್ಲಿನ ಕನಕಮ್ಮ ಪಾತ್ರವು ಒಬ್ಬ ತಾಯಿಯಾಗಿ ಒಂದು ಸಾಮಾಜಿಕ ಬದುಕಿನಲ್ಲಿರುವಾಗ ತನ್ನ ಮಗಳನ್ನು ಬೆಳೆಸುವ ಹೊಣೆ ಇದ್ದು ಅದನ್ನು ಅಚ್ಚುಕಟ್ಟಾಗಿ ನಿಭಾಯಿಸಿದ್ದಾಳೆ. ಗಂಡನಿಗೆ ತಕ್ಕ ಹೆಂಡತಿಯಾಗಿ ಮನೆಯ ಎಲ್ಲಾ ಜವಾಬ್ದಾರಿಗಳನ್ನು ಹೊತ್ತು ಮಕ್ಕಳನ್ನು ಬೆಳೆಸುವ ಹೊಣೆಯಿದೆ. ಹಾಗಾಗಿ ತ.ರಾ.ಸು. ರವರು ಈ ಪಾತ್ರದಲ್ಲಿ ಅಲ್ಲಲ್ಲಿ ಸಣ್ಣ ಪುಟ್ಟ ಲೋಪವಿದ್ದರೂ ಕಾದಂಬರಿಯ ಸುಸೂತ್ರ ಓಟಕ್ಕೆ ಬಿಗಿಬಂಧವನ್ನು ಏರ್ಪಡಿಸಿ ಮುಂದೆ ಸಾಗುತ್ತದೆ.

### .1.3. ನರಸಮ್ಮ (ಹೆಣ್ಣು ಕಟ್ಟಿದ ಮನೆ)

ತ.ರಾ.ಸು ಅವರ ಹಲವು ಸಾಮಾಜಿಕ ಕಾದಂಬರಿಗಳಲ್ಲಿ 'ಹೆಣ್ಣು ಕಟ್ಟಿದ ಮನೆ' ಯು ಒಂದು. ಇಲ್ಲಿನ ಪಾತ್ರಗಳು ಮಧ್ಯಮ ವರ್ಗದ ಕುಟುಂಬದ ವ್ಯವಸ್ಥೆಯನ್ನು ವಿವರಿಸುತ್ತದೆ. ಹೆಣ್ಣು ಮನಸ್ಸು ಮಾಡಿದರೆ ಏನನ್ನೂ ಬೇಕಾದರೂ ಮಾಡಬಲ್ಲಳು ಎಂಬುದಕ್ಕೆ ಈ ಕಾದಂಬರಿ ಒಂದು ತಾಜಾ ಉದಾಹರಣೆ. ಹೆಣ್ಣು ಒಂದು ಸಂಸಾರವನ್ನು ನಿಭಾಯಿಸಲು ಮಾಡುವ ತ್ಯಾಗಕ್ಕೆ ಯಾವುದೂ ಸಮನಲ್ಲ. ಮತ್ತೊಂದೆಡೆ ಹೆಣ್ಣಿಗೆ

ಹೆಣ್ಣೆ ಶತ್ರು ಎಂಬುದು ಈ ಕಾದಂಬರಿ ಮೂಲಕ ತಿಳಿಯಬಹುದು. ಹೆಣ್ಣಿಗೆ ಸ್ವಾತಂತ್ರ್ಯ ನೀಡಬೇಕು ಎಂದು ಒಂದೆಡೆ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಕೇಳಿಕೊಂಡರೆ ಹೆಣ್ಣಿಗೆ ಸ್ವಾತಂತ್ರ್ಯ, ಸ್ವೇಚ್ಛಾಚಾರ ನೀಡಿದರೆ ಏನೆಲ್ಲಾ ಅನಾಹುತಗಳಾಗುತ್ತವೆ ಎಂಬುದನ್ನು ಈ ಕಾದಂಬರಿಯಲ್ಲಿ ತ.ರಾ.ಸು. ಬಹಳ ಅದ್ಭುತವಾಗಿ ಚಿತ್ರಿಸಿದ್ದಾರೆ.

ಈ ಕಾದಂಬರಿಯಲ್ಲಿನ ಪ್ರಮುಖ ಪಾತ್ರವೇ ನರಸಮ್ಮ. ಈಕೆಯ ಪತಿರಾಯನೇ ರಾಮಾವಧಾನಿ. ರಾಮಾವಧಾನಿ ಜೊತೆಗೆ ಹುಟ್ಟಿದವರು ಮೂರು ಗಂಡು ಮಕ್ಕಳು. ನರಸಮ್ಮ ಹೆಣ್ಣಾಗಿ ಹುಟ್ಟಿದ್ದು ಸೃಷ್ಟಿಕರ್ತನ ತಪ್ಪು. ಗಂಡಸಾಗಿ ಹುಟ್ಟದಿದ್ದರೆ ಮತ್ತೊಂದು ಪಾಳೆಯ ಪಟ್ಟನ್ನೇ ಆಳುತ್ತಿದ್ದಳು. ಈಕೆ ತಾಯಿಗೆ ತಕ್ಕ ಮಗಳು. ತಾಯಿ ಕಲಿಸಿದ ವಿದ್ಯೆಯನ್ನು ಮೀನಿನ ಮರಿ ಈಜು ಕಲಿಯುವಷ್ಟು ಸಹಜವಾಗಿ ಕಲಿತು ಒಳ್ಳೆಯ ಮಗಳು ಎನಿಸಿಕೊಂಡಿದ್ದಳು. ನಂತರ ರಾಮಾವಧಾನಿಯ ಕೈಹಿಡಿದ ಮೇಲೆ ತನ್ನ ಅತ್ತೆ ಮಾವಂದಿರಿಗೂ ಅಚ್ಚುಮೆಚ್ಚಾದಳು.

ಒಮ್ಮೆ ಮಾವ ವೆಂಕಟರಾಮಾವಧಾನಿಗಳು ಸೊಸೆಯನ್ನು ಕರೆಸಿ ತನ್ನ ಮಗನು ದೇವರಂಥವನು, ವ್ಯವಹಾರ ಜ್ಞಾನ ಕಡಿಮೆ, ಮಂತ್ರ-ತಂತ್ರ, ವೇದಾಂತ, ರಾಮಾಯಣ ಮಹಾಭಾರತ ಗ್ರಂಥಗಳನ್ನು ಓದುವುದೇ ಅವನ ಕಾಯಕ. ಉಳಿದ ಅಣ್ಣ ತಮ್ಮಂದಿರಂತೆ ಮನೆಯ ಯಾವ ವ್ಯವಹಾರ ಜ್ಞಾನವು ಆತನಿಗೆ ತಿಳಿಯುವುದಿಲ್ಲವೆಂದು ತಿಳಿಸಿದ್ದರು. ಸೊಸೆಗೆ ತಿಳಿ ಹೇಳಿ ವ್ಯವಹಾರ ಜ್ಞಾನವನ್ನು ನೀನೇ ವಹಿಸಿಕೊಳ್ಳಬೇಕೆಂದು ಒಪ್ಪಿಸಿ, ಈ ವಿಷಯದ ಕುರಿತು ಮಗನನ್ನು ಒಪ್ಪಿಸಿದರು. ರಾಮಾವಧಾನಿಗೆ ತನಗಿಂತ ಮನೆಯ ಜವಾಬ್ದಾರಿ ವಹಿಸಿಕೊಳ್ಳುವ ಹೆಂಡತಿಯೆ ಸೂಕ್ತವೆಂದು ನರಸಮ್ಮನಿಗೆ ಎಲ್ಲವನ್ನು ವಹಿಸಿ ತಾನು ದುಡಿದು ಹೆಂಡತಿಯ ಕೈಗೆ ನೀಡಿ ಹಾಯಾಗಿರುವನೆಂದು ಹೇಳಿದ. ಈ ಮೂಲಕ ಮನೆಯ ಜವಾಬ್ದಾರಿಯನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಲು ನರಸಮ್ಮ ಅಣಿಯಾದಳು.

ಮುಂದೆ ವೆಂಕಟರಾಮಾವಧಾನಿಗಳಿಗೆ ಪ್ರಾಣೋತ್ಕ್ರಮಣದ ಮೊದಲು ನಿರೀಕ್ಷಿಸುತ್ತಿದ್ದಂತೆಯೇ ಅವರ ವೈಕುಂಠ ಸಮಾರಾಧನೆ ಮುಗಿದು ಮೂರು ಮಕ್ಕಳು ಆಸ್ತಿಯನ್ನು ಪಾಲು ಮಾಡಿ ಪ್ರತ್ಯೇಕವಾಗಿ ವಾಸ ಮಾಡಲು ತೀರ್ಮಾನಿಸಿದರು. ಈ ಮೂಲಕ ನರಸಮ್ಮ ರಾಮಾವಧಾನಿ ದಂಪತಿಗಳಿಗೆ ನೆಲಮಂಗಲದಲ್ಲಿನ ಆಸ್ತಿ ದೊರಕಿ ಇಲ್ಲಿ ಬಂದು ವಾಸ ಮಾಡಲು ತಯಾರಾದರು. ಮುಂದೆ ಸಂಸಾರವನ್ನು ನಿರ್ವಹಿಸುವ ನರಸಮ್ಮನ ಸರದಿ.

ಸಂಸಾರಕ್ಕಾಗಿ ಜಮೀನಿನಿಂದ ಬರುತ್ತಿದ್ದ ಕಾಳು-ಕಡ್ಡಿ, ಪೌರೋಹಿತ್ಯದಿಂದ ಬರುತ್ತಿದ್ದ ಪುಡಿಗಾಸು. ಇಷ್ಟರಲ್ಲೆ ಒಂದರ ಹಿಂದೊಂದು ಶ್ರೀನಿವಾಸ, ಪದ್ಮಾವತಿ ಎಂಬ ಎರಡು ಮಕ್ಕಳಾದವು. ಕುಟುಂಬ ನಿರ್ವಹಣೆಯ ವಿಷಯದಲ್ಲಿ ಜಾಣೆಯಾಗಿದ್ದ ಎರಡು ಮಕ್ಕಳ ತಾಯಿಯಾದ ಬಳಿಕ ಇದ್ದದ್ದೂ

ಖುಷಾರಾದಳು. ತಾವು ಬಡವರೆಂದು ಯಾರಿಗೂ ತೋರಗೊಡದೇ, ಸುತ್ತಲ ಹತ್ತು ಸಂಸಾರದವರ ವಿಶ್ವಾಸವನ್ನು, ತನ್ನ ಸಂಸಾರಕ್ಕೆ ಕೋಟೆ ಮಾಡಿಕೊಂಡು ಸಣ್ಣ ಪುಟ್ಟ ಮಡಿಗಾಸನ್ನು ಸಾಲವಾಗಿ ನೀಡಿ ದಿನದಿನಕ್ಕೆ ಬಂಡವಾಳ ಬೆಳೆಸಿ ಬಡ್ಡಿ ವ್ಯವಹಾರ ಮಾಡುವ 'ಮಾರವಾಡಿ ನರಸೋಜಮ್ಮ'ನಾಗಿ ಬೆಳೆದಳು.

ಮುಂದೆ ನರಸಮ್ಮ ಬಹಳ ಎತ್ತರಕ್ಕೆ ಬೆಳೆಯುತ್ತಾ ರೈತರ ವಿಶ್ವಾಸವನ್ನು ಗಳಿಸಿ ಊರಿನಲ್ಲಿ ಸ್ವಂತ ಮನೆ ಕಟ್ಟುವ ಯೋಚನೆ ಮಾಡಿ ಅದಕ್ಕೂ ಅಣಿಯಾದಳು. ಹಾಗೆಯೇ ನೆರಮನೆಯ ಹೆಂಗಸಿನ ಜೊತೆ ಮಾತನಾಡುತ್ತಿರುವಾಗ ಉದ್ದೇಶಪೂರ್ವಕವಾಗಿಯೋ ಅಥವಾ ಲೋಕಾಭಿರಾಮವಾಗಿಯೋ ಸ್ವಂತ ಮನೆ ಇಲ್ಲದವರಿಗೆ ಸಮಾಜದಲ್ಲಿ ಗೌರವವಿಲ್ಲ ಎಂಬ ಮಾತನ್ನು ಕೇಳಿ ಅದನ್ನೇ ಸವಾಲಾಗಿ ಸ್ವೀಕರಿಸಿ ಸ್ವಂತ ಮನೆ ಕಟ್ಟುವ ವಿಷಯಕ್ಕೆ ಆಸ್ತಿ ಭಾರವನ್ನು ಹಾಕುವ ಕೆಲಸವನ್ನು ಮನಸ್ಸಲ್ಲೆ ಲೆಕ್ಕ ಹಾಕಿದಳು.

ಮನೆ ಕಟ್ಟುವ ವಿಚಾರದಲ್ಲಿ ಮಾದೇಗೌಡರನ್ನು ಒಪ್ಪಿಸಿ ಅದಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿಕೊಂಡು ತನ್ನ ಸಣ್ಣ ಪುಟ್ಟ ಗಂಟು ಅದಕ್ಕೆ ಹಾಕಿ, ಪರಿಚಿತರ ಬಳಿ ಸಣ್ಣ ಪುಟ್ಟ ಸಾಲ ಮಾಡಿ, ಅಂತೂ ಆರು ತಿಂಗಳ ಒಳಗಾಗಿ 'ಗೃಹ ಪ್ರವೇಶ' ಕಾರ್ಯವೂ ನಡೆದು ಹೋಯಿತು. ಸ್ವಂತ ಮನೆ ಆದದ್ದನ್ನು ಕಂಡು, ನರಸಮ್ಮನ ಸಾಹಸವನ್ನು ರಾಮಾವಧಾನಿ ಬಾಯಿ ತುಂಬಾ ಹೊಗಳಿದನು.

ಮುಂದೆ ತನ್ನ ಮಗ ಶ್ರೀನಿವಾಸನಿಗೆ ಪೌರೋಹಿತ್ಯದಲ್ಲಿ ಆಸಕ್ತಿ ಇಲ್ಲ, ಜೊತೆಗೆ ಅದರಿಂದ ಬರುವ ಆದಾಯದಲ್ಲಿ ಮಕ್ಕಳ ಮದುವೆ ಮುಂಜಿ ಮಾಡಲಾಗುವುದಿಲ್ಲವೆಂದು ಅರಿತ ನರಸಮ್ಮ ಶ್ರೀನಿವಾಸನಿಗೆ ಲೋವರಿ ಸೆಕೆಂಡರಿ ಪರೀಕ್ಷೆ ಪಾಸು ಮಾಡಿಸಿ, ಅಮಲ್ದಾರರ ಕೈಕಾಲು ಹಿಡಿದು ತಾಲ್ಲೂಕು ಕಚೇರಿಯಲ್ಲಿ ಗುಮಾಸ್ತ ಕೆಲಸವನ್ನು ಕೊಡಿಸಿದಳು. ಶ್ರೀನಿವಾಸನ ತಲೆ ತುಂಬಾ ಸಗಣಿ ತುಂಬಿದೆ ಎಂದು ಹೇಲ್ಲೆತ್ತಿದ್ದವರಿಗೆಲ್ಲಾ ಬಾಯಿ ಮೇಲೆ ಬೆರಳು ಇಟ್ಟು ಆಶ್ಚರ್ಯದಿಂದ ನೋಡುವಂತೆ ಮಾಡಿದಳು. ಮುಂದೆ ಮತ್ತೊಂದು ಮಗು ಶೇಷಾಚಲನು ಹುಟ್ಟಿ ಸಂಸಾರದ ಸದಸ್ಯರ ಸಂಖ್ಯೆ ದೊಡ್ಡದಾಯಿತು.

ಮಗ ಶ್ರೀನಿವಾಸನು ಮದುವೆ ವಯಸ್ಸಿಗೆ ಬಂದು ಆತನಿಗೆ ಮದುವೆ ಮಾಡಲು ಅಣಿಯಾದಳು. ನೂರು ಜನರ ದುಡಿಮೆಯ ಯಜಮಾನಿಕೆ ಇದ್ದರೂ ತಾನು ಯಾವುದೇ ರೀತಿಯ ಆಡಂಬರವನ್ನು ಮಾಡಿಕೊಳ್ಳಲಿಲ್ಲ. ಸೀರೆ ತೊಡುವ, ಒಡವೆ ಹಾಕಿಕೊಳ್ಳುವ ಅನುಕೂಲ ತನಗಿದ್ದರೂ, ಆ ಬಗ್ಗೆ ಇತರೆ ಹೆಂಗಸರು ಆಡಿಕೊಳ್ಳುತ್ತಿದ್ದರೂ, ತಾನು ಮನೆಯನ್ನು ನಿರ್ವಹಣೆ ಮಾಡಬೇಕು, ತನ್ನ ಸಂಸಾರದ ನೊಗವನ್ನು ಹೊರಬೇಕು, ಮಕ್ಕಳಿಗೆ ಉತ್ತಮ ಭವಿಷ್ಯ ರೂಪಿಸಬೇಕೆಂಬ ಒಂದೇ ಕಾರಣದಿಂದ ಸೀರೆ, ಒಡವೆ ಒಳಗೊಂಡ ಯಾವುದೇ ಆಡಂಬರ ಜೀವನದ ಮೇಲೆ ಆಸೆ ಪಡಲಿಲ್ಲ ನರಸಮ್ಮ. ಈ ಬಗ್ಗೆ ಮಗ ಶ್ರೀನಿವಾಸ ಕೇಳಿದಾಗ "ನನಗೆ ವಯಸ್ಸಾಗಿದೆ, ಅವನ್ನೆಲ್ಲಾ ತೊಟ್ಟು ಇನ್ನಾವ ಪಟ್ಟದ ರಾಣಿಯಾಗಬೇಕು. ನಿನ್ನ ಹೆಂಡತಿಗೆ ಕೊಡು, ಅದನ್ನು ನೋಡಿ ನಾನು ಸಂತೋಷಪಡುತ್ತೇನೆ" ಎಂದಿದ್ದಳು. ಹಾಗೆಯೇ ಮಗ ಶ್ರೀನಿವಾಸನಿಗೆ

ಶ್ರೀಮಂತರ ಮನೆಯ ಹೆಣ್ಣಿಗಿಂತ ಬಡವರ ಹೆಣ್ಣೇ ಮೇಲು ಎಂದು ಪಾಪಾಶಾಸ್ತ್ರಿಗಳ ಮಗಳಾದ ವೆಂಕಮ್ಮಳನ್ನು ಮಗನಿಗೆ ತಂದುಕೊಂಡು ಅವಳಿಗೂ ಕುಟುಂಬ ನಿರ್ವಹಣೆಯ ಜಾಣತನವನ್ನು ಕಲಿಸಿದಳು. ನಂತರ ಇನ್ನೂ ಇಪ್ಪತ್ತು ವರ್ಷ ಬದುಕುತ್ತಾಳೆಂದುಕೊಂಡಿದ್ದ ನರಸಮ್ಮ 'ವಿಷಮಶೀತ ಜ್ವರದಿಂದ' ಬೇಗನೇ ತೀರಿಕೊಂಡಳು.

ಹೆಣ್ಣು ಕಟ್ಟಿದ ಮನೆ ಕಾದಂಬರಿಯಲ್ಲಿ ನರಸಮ್ಮ ಭಾರತೀಯ ಮಧ್ಯಮ ವರ್ಗದ ಕುಟುಂಬದ ಹೆಣ್ಣು ಮನೆಯ ಜವಾಬ್ದಾರಿ ಎಷ್ಟು ಜಾಣತನದಿಂದ ನಿರ್ವಹಿಸಬಹುದು ಎಂಬುದನ್ನು ತೋರಿಸಿಕೊಟ್ಟಿದ್ದಾಳೆ. ತನ್ನ ಮಾವನವರು ಮಗನಿಗೆ ವ್ಯವಹಾರ ಜ್ಞಾನ ಕಮ್ಮಿ ಎಂದಾಗ ಸಂಸಾರದಲ್ಲಿ ಯಾವುದೇ ದುಂದು ವೆಚ್ಚ ಮಾಡದೇ ತನ್ನ ಮಾವನವರ ನಂಬಿಕೆ ಉಳಿಸಿಕೊಳ್ಳುತ್ತಾಳೆ. ಈ ಮೂಲಕ ಒಂದು ಹೆಣ್ಣು ತಾನು ಮನಸ್ಸು ಮಾಡಿದರೆ ಏನೂ ಬೇಕಾದರೂ ಮಾಡುತ್ತಾಳೆ ಎಂಬುದನ್ನು ಅಕ್ಷರಶಃ ನಿರೂಪಿಸಿ ಇತರೆ ಹೆಣ್ಣು ವರ್ಗಕ್ಕೆ ಆದರ್ಶಪ್ರಾಯವಾಗಿ ನಿಂತಿದ್ದಾಳೆ.

**4.1.4. ವೆಂಕಮ್ಮ (ಹೆಣ್ಣು ಕಟ್ಟಿದ ಮನೆ)**

ತ.ರಾ.ಸು. ರವರ 'ಹೆಣ್ಣು ಕಟ್ಟಿದ ಮನೆ' ಕಾದಂಬರಿಯಲ್ಲಿ ಮತ್ತೊಂದು ಪಾತ್ರವೆಂದರೆ ವೆಂಕಮ್ಮನದು. ನರಸಮ್ಮನ ತದ್ವಿರುದ್ಧವಾಗಿ ಈ ಪಾತ್ರ ಜನ್ಮ ತಾಳಿದೆ. ಇಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಎನ್ನುವ ಮಾತಂತೆ ವೆಂಕಮ್ಮನ ಪಾತ್ರವಿದೆ. ಮದುವೆಯಾಗಿ ಬಂದ ಹೊಸತರಲ್ಲಿ 'ಅತ್ತೆಗೆ ತಕ್ಕ ಸೊಸೆ' ಎನಿಸಿಕೊಳ್ಳುವ ವೆಂಕಮ್ಮಳು ತನ್ನ ಅತ್ತೆ ನರಸಮ್ಮನ ಸಾವಿನ ನಂತರ ತನ್ನ ನಿಜಸ್ವರೂಪವನ್ನು ತೋರಿಸುತ್ತಾಳೆ. ಮದುವೆಯಾಗಿ ಬಂದಾಗ ಇಡೀ ಊರೇ ನರಸಮ್ಮನಿಗೆ ಸೊಸೆಯ ವಿಚಾರದಲ್ಲಿ ಶಹಬ್ಬಾಸ್ ಹೇಳುತ್ತಿರುವಾಗ "ಹಾವಿಗೆ ಎಷ್ಟೇ ಹಾಲೆರೆದರೂ ಅದು ಹೊರಹಾಕುವುದು ವಿಷವನ್ನೇ ಹೊರತು ಅಮೃತವನ್ನಲ್ಲ" ಎಂಬ ಮಾತಿಗೆ ತಕ್ಕಂತೆ ನಡೆದುಕೊಳ್ಳುತ್ತಾಳೆ ವೆಂಕಮ್ಮ. ತನಗೆ ಸಂಸಾರದ ಸೂತ್ರ ಒದಗಿ ಬಂದಾಗ ನರಸಮ್ಮನ ತದ್ರೂಪಿಯಾಗಿ ವೆಂಕಮ್ಮನು ಮನೆಯ ಇಡೀ ಜವಾಬ್ದಾರಿಯನ್ನು ಅದ್ಭುತವಾಗಿ ನಿರ್ವಹಿಸುತ್ತಾಳೆ ಎಂದುಕೊಂಡ ಊರ ಜನರು ಆಕೆ ಗೋವಿನ ಮುಖವಾಡ ಹಾಕಿರುವ ವ್ಯಾಘ್ರ ಎಂದು ಆರಂಭದಲ್ಲಿ ತಿಳಿಯುವುದೇ ಇಲ್ಲ. ಮುಂದೆ ಸಾಗುತ್ತಾ ವೆಂಕಮ್ಮ ಒಗ್ಗಟ್ಟಾಗಿರಬೇಕಿದ್ದ ಸಂಸಾರವೇ ಒಡೆದು ಹಾಳು ಮಾಡುವ ಕೀಲಿಕೈಯನ್ನು ವೆಂಕಮ್ಮ ತನ್ನ ಕೈಯಲ್ಲಿಟ್ಟುಕೊಂಡು ತನ್ನ ಸೂತ್ರಕ್ಕೆ ತಕ್ಕಂತೆ ಕುಟುಂಬವನ್ನು ಆಡಿಸುತ್ತಾಳೆ.

ನರಸಮ್ಮನವರು ಒಳ್ಳೆ ಸೊಸೆಯನ್ನು ಮಗನಿಗೆ ತಂದುಕೊಂಡಿದ್ದಾರೆಂಬುದು ಊರಿನವರ ನಂಬೋಣವಾಗಿತ್ತು. ಆದರೆ ಅದನ್ನು ವೆಂಕಮ್ಮ ಬಹುಬೇಗ ಹುಸಿ ಮಾಡಿದಳು. 'ತಿರುಕನಿಗೆ ಐಶ್ವರ್ಯ

ಬಂದರೆ ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿದನಂತೆ" ಎಂಬಂತೆ ವೆಂಕಮ್ಮ ಇಡೀ ಮನೆಯ ಎಲ್ಲಾ ಜವಾಬ್ದಾರಿಯೇ ನನ್ನದೆಂಬತೆ 'ಮಹಾರಾಣಿ' ಯಾಗಿ ಅಧಿಕಾರ ಚಲಾಯಿಸಲು ಆರಂಭಿಸಿದಳು, ಕಾರಣ ವೆಂಕಮ್ಮನ ಕುಟುಂಬದಲ್ಲಿ ಅವಳ ಚಿಕ್ಕ ವಯಸ್ಸಲ್ಲಿ ಅವಳ ಮನೆಯ ಗಂಡಸರು ಹೆಂಗಸಿಗರಿಗೆ ಯಾವುದೇ ಸ್ವಾತಂತ್ರ್ಯ ನೀಡಿರಲಿಲ್ಲ. 'ಹೆಂಗಸಿಗೇಕೆ ಇಲ್ಲದ ಅಧಿಕ ಪ್ರಸಂಗ, ಸಟ್ಟುಗ ಆಡಿಸೋರಿಗೆ ಪ್ರಪಂಚ ವ್ಯವಹಾರವೇನು ಗೊತ್ತು' ಎಂದು ಹೇಳುತ್ತಾ ಹೆಂಡತಿ, ತಂಗಿ, ಅಕ್ಕ-ತಂಗಿ, ಸೊಸೆ ಯಾರೇ ಇರಲಿ ಆ ಮನೆಯಲ್ಲಿ ಗಂಡಸರಿಗೆ ಹೆದರಿಯೇ ನಡೆಯಬೇಕಾಗಿತ್ತು. ಇಂಥ ವಾತಾವರಣದಲ್ಲಿ ಬೆಳೆದ ವೆಂಕಮ್ಮನಿಗೆ ಇಡೀ ಸಂಸಾರದ ಯಜಮಾನಿಯಾಗುವ ಅವಕಾಶ ಬಂದಾಗ ಇಡೀ ಪ್ರಪಂಚವನ್ನೇ ಗೆದ್ದ ಅನುಭವವಾಯಿತು. ಮುಂದೆ ರಾಮಾವಧಾನಿ ಕುಟುಂಬದ ಒಟ್ಟು ಕೀಲಿಕೈ ತನ್ನ ಕೈಗೆ ಬಂದ ಮೇಲಂತೂ ಇಡೀ ಸ್ವರ್ಗಕ್ಕೆ ಮೂರೇ ಗೇಣು ಎಂಬಂತೆ ತನ್ನ ಅಧಿಕಾರ ಚಲಾಯಿಸತೊಡಗಿದಳು.

ವೆಂಕಮ್ಮನಿಗೆ ಆ ಮನೆಯಲ್ಲಿ ನರಸಮ್ಮ ನಡೆಸುತ್ತಿದ್ದ ಅಧಿಕಾರ, ದರ್ಬಾರು ಎಲ್ಲವನ್ನು ತಾನು ನಡೆಸಬೇಕೆಂಬ ದಾಹವೇನೋ ಬೇಕಾದಷ್ಟಿದ್ದರೂ ಅದಕ್ಕೆ ಬೇಕಾದ ಯೋಗ್ಯತೆ ಮಾತ್ರ ಇರಲಿಲ್ಲ. ಅಧಿಕಾರವನ್ನು ಸಮರ್ಪಕವಾಗಿ ನಿರ್ವಹಿಸಲು ಕೇವಲ ಪದವಿಯೊಂದೇ ಸಾಲದು. ಆ ನಿರ್ವಹಣೆಯ ತಾಂತ್ರಿಕತೆ ಅಧಿಕಾರ ಪಡೆದ ವ್ಯಕ್ತಿಗೆ ಹುಟ್ಟಿ ಬಂದಿರಬೇಕು. ಅಲ್ಪನಿಗೆ ಅಧಿಕಾರ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ ಎಂಬ ಗಾದೆಯಂತೆಯೇ ಬಹು ಸಂದರ್ಭಗಳಲ್ಲಿ ಸಾರ್ಥಕವಾಗಿ, ಹುಟ್ಟಿನಿಂದಾಗಲಿ, ಗುಣದಿಂದಾಗಲಿ, ಅರ್ಹತೆಯಿಲ್ಲದೆ ಅಧಿಕಾರಕ್ಕೆ ಬಂದ ವ್ಯಕ್ತಿಯ ಅಧಿಕಾರ ದಬ್ಬಾಳಿಕೆಯಾಗಿ, ಅಹಂಕಾರದ ಆಡಂಬೊಲವಾಗಿ ಬಹುಬೇಗ ಅಪ್ರಿಯವಾಗುತ್ತದೆ ಎಂಬುದಕ್ಕೆ ವೆಂಕಮ್ಮನಿಗೆ ಮನೆ ಜವಾಬ್ದಾರಿ ಅಧಿಕಾರ ಸಿಕ್ಕೊಡನೆ ಆಕೆ ಪ್ರತಿಕ್ರಿಯಿಸುವ ರೀತಿಯಿಂದಲೇ ಅರ್ಥವಾಗುತ್ತದೆ.

ವೆಂಕಮ್ಮನು ತಾನು ಮೊದಲು ಅಧಿಕಾರ ಚಲಾಯಿಸಿದ್ದು ತನ್ನ ಗಂಡ ಶ್ರೀನಿವಾಸಾವಧಾನಿಯ ಮೇಲೆ ಈಗಾಗಲೇ ತನ್ನ ತಾಯಿ ಸತ್ತಾಗ ಕಾರ್ಯ ಮಾಡಲು ಮಾಡಿದ್ದ ಸಾಲವು ಅವನ ಮೇಲಿದೆ ಹಾಗೂ ಆಗಲೇ ತನ್ನ ನಾದಿನಿಯನ್ನು ತವರು ಮನೆಯಲ್ಲೇ ಬಿಟ್ಟಿದ ನಾರಾಯಣ ಶಾಸ್ತ್ರಿಗಳು ಆದಷ್ಟು ಬೇಗ ನಿಷೇಕದ ಕಾರ್ಯ ಮಾಡಿ ಗಂಡನ ಮನೆಗೆ ಕಳುಹಿಸಬೇಕೆಂದು ರಾಮಾವಧಾನಿಗಳಿಗೆ ಪತ್ರ ಬರೆದಿದ್ದರು. ಆಗ ಪ್ರಸ್ತಕ್ಕೆ ಕಡಿಮೆ ಎಂದರೂ ಮುನ್ನೂರು ರೂಪಾಯಿಗಳಾಗವುದೆಂದು ಆಲೋಚಿಸಿದ ಶ್ರೀನಿವಾಸವಧಾನಿ ತನ್ನ ಹೆಂಡತಿ ವೆಂಕಮ್ಮನಿಗೆ ಈ ವಿಷಯ ತಿಳಿಸಿದಾಗ ಅವಳು ನಾಗರಹಾವಂತೆ ಬುಸುಗುಟ್ಟಿ ತನ್ನ ಅಸಲಿ ಮುಖವನ್ನು ತೋರಿಸಲು ಆರಂಭಿಸಿದಳು. ಆಗ ತನ್ನ ಮೈದುನ ಶೇಷಾಚಲನನ್ನು ಗುರುತಿಸಿ ಅವನು ಈ ಮನೆಯ ಜವಾಬ್ದಾರಿ ವಹಿಸಿಕೊಳ್ಳಬೇಕೆಂದು, ಈ ಕಾರ್ಯಕ್ಕೆ ಶೇಷಾಚಲನು ಹಣ ನೀಡಬೇಕೆಂದು ಅವನ್ನು ಒಪ್ಪಿಸಲು ಗಂಡನನ್ನು ಮನವೊಲಿಸುತ್ತಾಳೆ. ಆಗ ಶ್ರೀನಿವಾಸವಧಾನಿ ತಮ್ಮನಿಗೆ ಒಳ್ಳೆಯದನ್ನೆ ಮಾಡುವವನಂತೆ ನಟಿಸಿ

ಅನಂತಶೆಟ್ಟರ ಬಳಿ ತನ್ನ ಸಾಲವನ್ನು ತೀರಿಸುವಷ್ಟು ಹಣ ಬರೆಯಿಸಿ, ಮೋಸದಿಂದ ಶೇಷಾಚಲನ ಹತ್ತಿರ ರುಜು ಹಾಕಿಸಿ ಹೆಂಡತಿಯ ಮನೋಭಿಲಾಷೆಯನ್ನು ನೆರವೇರಿಸುತ್ತಾನೆ.

ಮುಂದೆ ವೆಂಕಮ್ಮಳು ಗರ್ಭಿಣಿಯಾಗಿ ಹೆರಿಗೆಯಾಗುವ ತನಕ ತನ್ನ ತಂಗಿ ಭಾಗೀರಥಿಯನ್ನು ತನ್ನ ಮನೆಗೆ ಕರೆಯಿಸಿಕೊಳ್ಳುತ್ತಾಳೆ. ಈ ಹಿಂದೆ ಶೇಷಾಚಲನನ್ನು ಮನೆಯಲ್ಲಿ ಆತಿಥ್ಯ ಮಾಡುವಾಗ ಕೊಂಕು ಮಾತುಗಳನ್ನಾಡಿ ತನ್ನ ಯಜಮಾನಿಕೆಯ ದರ್ಪವನ್ನು ತೋರಿಸುತ್ತಾಳೆ. ಇದನ್ನು ತನ್ನ ತಂಗಿ ಮೂಲಕವೂ ಮಾಡಿಸುತ್ತಾಳೆ. ದಿನಗಳೆದಂತೆ ಈ ದರ್ಪದ ಎಲ್ಲೆ ಮೀರಿ ಇಡೀ ಮನೆಯ ಎಲ್ಲಾ ಆಗು-ಹೋಗುಗಳು ತನ್ನಿಂದಲೇ ನಡೆಯಬೇಕು. ತನ್ನ ಅನುಮತಿಯಿಲ್ಲದೆ ಈ ಮನೆಯಲ್ಲಿ ಒಂದು ಹುಲ್ಲು ಕಡ್ಡಿಯು ಅಲುಗಾಡಬಾರದೆಂಬಂತೆ ತನ್ನ ದರ್ಪವನ್ನು ತೋರಿಸುತ್ತಾಳೆ.

ತಾಯ್ತನ ಹೆಣ್ಣಿನ ಜೀವನದಲ್ಲೊಂದು ಪರ್ವಕಾಲ. ಈ ಮೂಲಕ ವೆಂಕಮ್ಮಳಿಗೆ ಹೆರಿಗೆಯಾಗಿ ಗಂಡು ಮಗುವಿನ ಜನನವಾಯಿತು. ಇದಾದ ನಂತರವಂತೂ ತನ್ನ ತಲೆಗೆ ಮತ್ತೆರಡು ಕೋಡು ಬಂದ ಹಾಗಾಯಿತು. ಗಂಡು ಮಗು ಜನನವಾದ ನಂತರವಂತೂ ಇಡೀ ಮನೆಯವರೆಲ್ಲಾ ತನ್ನ ಕಾಲಕೆಳಗೆ ಬಿದ್ದಿರಬೇಕೆಂಬ ಭಾವನೆಯಲ್ಲಿ ಇದ್ದಳು. ಶೇಷಾಚಲನನ್ನು ತಾನು ಹೇಗೆ ಮಂಕುದಿಣ್ಣೆ ಮಾಡಿರುವೆನೆಂಬ ಯೋಜನೆಯನ್ನು ತಂಗಿ ಭಾಗೀರಥಿಯ ಬಳಿ ಹೇಳಿದಳು. ಆದರೆ ಇದು ಸಂಪೂರ್ಣವಾಗಿ ಉಲ್ಟಾ ಆಗುವುದೆಂದು ಆಕೆ ಯೋಚಿಸಿರಲಿಲ್ಲ.

ಮುಂದೆ ಭಾಗೀರಥಿಯನ್ನು ಶೇಷಾಚಲನಿಗೆ ಮದುವೆ ಮಾಡಿಸಬೇಕೆಂದು ಇದಕ್ಕೆ ಕುಟುಂಬದ ಎಲ್ಲರ ಒಪ್ಪಿಗೆಯು ಇರುವುದಾಗಿ ಎಂದು ಶ್ರೀನಿವಾಸವಧಾನಿ ಹೇಳಿದಾಗ ಬುಸುಗುಟ್ಟದ ಹಾವಿನಂತೆ ತನ್ನ ಒಪ್ಪಿಗೆಯಿಲ್ಲವೆಂದು ಹೇಳಿದಳು. ತನ್ನ ಜೀವನದಲ್ಲಿ ಎಂದೂ ತನ್ನ ತಂದೆಯ ಹತ್ತಿರ ಎದುರು ಮಾತನಾಡದ ವೆಂಕಮ್ಮ ತಂದೆ ಪಾಪಾ ಶಾಸ್ತ್ರಿಗಳ ಮುಂದೆ ಮಾತನಾಡಿದ್ದು ಅವರಿಗೂ ಆಶ್ಚರ್ಯವಾಯಿತು.

ಶೇಷಾಚಲನನ್ನು ಮದುವೆ ಮಾಡಿಕೊಳ್ಳಲು ಒಪ್ಪಿದ ಭಾಗೀರಥಿಯು ತನ್ನ ಅಕ್ಕ, ಭಾವ ಮಾಡಿರುವ ಮೋಸವನ್ನು ಮನೆಯವರಿಗೆಲ್ಲಾ ಹೇಳಿ ಆಸ್ತಿಯನ್ನು ಪಾಲು ಮಾಡಲು ಹಿರಿಯರಿಗೆ ತಿಳಿಸುತ್ತಾರೆ.

ಒಟ್ಟಾರೆ ವೆಂಕಮ್ಮನ ಪಾತ್ರವು ಅಪರೂಪಕ್ಕೆ ಸಿಕ್ಕ ಅಧಿಕಾರವನ್ನು ಅನುಭವಿಸುವ, ಆ ಮೂಲಕ ಎಲ್ಲರನ್ನು ತನ್ನ ಹದ್ದು ಬಸ್ತಿನಲ್ಲಿಟ್ಟುಕೊಳ್ಳಲು ಹವಣಿಸುವ, ತನ್ನ ಮಾತೇ ಅಂತಿಮವೆಂದು ಮಹಾರಾಣಿಯಾಗಿ ಆಡಳಿತ ಮಾಡಬೇಕೆಂಬ ಅತಿಯಾಸೆ ಇರುವ ಪಾತ್ರ.

**4.1.5 ರತ್ನಮ್ಮ (ಚಂದನದ ಗೊಂಬೆ)**

ತ.ರಾ.ಸು. ಅವರ ಹಲವು ಸಾಮಾಜಿಕ ಕಾದಂಬರಿಗಳಲ್ಲಿ ಚಲನಚಿತ್ರವಾಗಿಯೂ ಯಶಸ್ಸು ಗಳಿಸಿದ ಕಾದಂಬರಿಗಳಲ್ಲಿ ಚಂದನದ ಗೊಂಬೆಯು ಒಂದು. ಒಂದು ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಈ ಕಾದಂಬರಿಯನ್ನು ಅವಲೋಕಿಸುವುದಾದರೆ ಒಂದು ಮುಗ್ಧ ಹೆಣ್ಣಿನ ಜೀವನದಲ್ಲಿ ಏನೆಲ್ಲಾ ಘಟನೆಗಳು ಸಂಭವಿಸುತ್ತವೆ. ಆ ಘಟನೆಗಳನ್ನು ಆಕೆ ಹೇಗೆ ಎದುರಿಸುತ್ತಾಳೆ. ತನ್ನ ಜೀವನದ ಅಂತಿಮ ಕ್ಷಣದವರೆಗೂ ಅದನ್ನು ಹಾಗೆಯೇ ಕಾಪಾಡಿಕೊಂಡು ಯಾರು ಏನೇ ಎಂದರೂ ತನ್ನ ಸಂಸಾರದಲ್ಲಿ ತನ್ನ ಗಂಡ, ಮಗುವೇ ಮುಖ್ಯವೆಂದು ಭಾವಿಸಿ ಯಾರಿಗೂ ಕೆಡುಕನ್ನು ಬಯಸದ ಹಾಲಿನಷ್ಟೇ ಶುದ್ಧ ಮನಸ್ಸಿನ ಹೆಣ್ಣು ರತ್ನಮ್ಮ. ಜೀವನದಲ್ಲಿ ತವರು ಮನೆ-ಗಂಡನ ಮನೆ ಎರಡೂ ಕಡೆಯೂ ಕೀರ್ತಿಯನ್ನು ತಂದು, ಬರುವ ಕಷ್ಟ, ದುಃಖ, ನೋವುಗಳನ್ನು ನುಂಗಿ, ಸಮಾಜದ ಗೊಡ್ಡು ಸಂಪ್ರದಾಯಗಳು ಏನೇ ಹೇಳಿದರೂ ಅದನ್ನೆಲ್ಲಾ ಧಿಕ್ಕರಿಸಿ ತನ್ನ ಮನಸಾಕ್ಷಿಯಂತೆ ನಡೆದುಕೊಳ್ಳುವ ಹೆಣ್ಣು ರತ್ನಮ್ಮ.

ಕಾದಂಬರಿಯ ಆರಂಭವಾದ ರತ್ನಮ್ಮನ ಪಾತ್ರ ತೆರೆದುಕೊಳ್ಳುತ್ತದೆ. ಸೋಮನಹಳ್ಳಿಯ ಸೀತಾರಾಮಯ್ಯನನ್ನು ತಾನು ಮದುವೆಯಾದ ನಂತರ ಸಂಸಾರವನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಯತ್ನಿಸದೇ, ಪತಿಯೇ ಪರದೈವ ಎಂಬಂತೆ ಗಂಡನ ಮಾತೇ ವೇದವಾಕ್ಯದಂತೆ ನಡೆದುಕೊಳ್ಳುತ್ತಾ ಸಾಗಿದಳು. ತಾನು ಮದುವೆಯಾದ ಆರಂಭದಲ್ಲಿ ಪತಿ ಸೀತಾರಾಮುವಿನ ಸ್ವಭಾವವನ್ನು ಅರ್ಥ ಮಾಡಿಕೊಂಡಳು. ಸೀತಾರಾಮು ಎಂದಿನಂತೆ ಶಾನುಭೋಗಿಕೆ ಕೆಲಸದಲ್ಲೊ, ಇಸ್ಪೀಟಿನಲ್ಲೋ, ಬಯಲು ನಾಟಕದ ಗುಂಪಿನಲ್ಲೋ ಮೈಮರೆತು ಕುಳಿತು ಬಿಡುತ್ತಿದ್ದ. ಈಗ ತನಗೆ ಮದುವೆಯಾಗಿದೆ, ಹೆಂಡತಿ ತನಗಾಗಿ ಕಾದಿರುತ್ತಾಳೆ. ಇಂಥ ಯಾವುದೇ ಯೋಚನೆಯನ್ನು ಮಾಡದೇ ಕುಳಿತುಬಿಡುತ್ತಿದ್ದ. ಆದರೆ ರತ್ನಮ್ಮಳ ಜಾಗದಲ್ಲಿ ಬೇರೆ ಯಾರೇ ಇದ್ದಿದ್ದರೂ ರಂಪಾಟ ಮಾಡಿ ದೂರಿನ ಸರಮಾಲೆಯನ್ನೇ ತನ್ನ ತಂದೆಯ ಬಳಿ ಒಯ್ಯುತ್ತಿದ್ದರು. ಹಾಗೆಯೇ ಸೀತಾರಾಮು ಎಲ್ಲರಿಗೂ ಬೇಕಾದವನಾದ್ದರಿಂದ ಸಂಸಾರಕ್ಕೆ ಬೇಕಾದ ಎಲ್ಲಾ ಸಾಮಾನುಗಳು ಊರಿನ ರೈತರಿಂದ ಬರುತ್ತಿದ್ದವು.

ಹಾಗೆಯೇ 'ಅತಿಥಿ ದೇವೋಭವ' ಎಂಬ ಮಾತಿದೆ. ಸೀತಾರಾಮು ತನಗೆ ಮದುವೆ ಆಗಿದೆ. ಮೊದಲಿನಂತೆ ತಾನು ಇಷ್ಟ ಬಂದ ಹಾಗೆ ಯಾರನ್ನು ಮನೆಗೆ ಕರೆದುಕೊಂಡು ಹೋಗಬಾರದೆಂದು ತಿಳಿಯದೇ ಯಾರನ್ನಾದರೂ ಅತಿಥಿಗಳನ್ನು ಮನೆಗೆ ಕರೆದುಕೊಂಡು ಹೋದರೆ ರತ್ನಮ್ಮ ಸ್ವಲ್ಪವೂ ಮುನಿಸು ಮಾಡಿಕೊಳ್ಳದೇ ಎಲ್ಲರಿಗೂ ನಗುವಿನಿಂದಲೇ ಉಪಚಾರ ಮಾಡಿ ಕಳುಹಿಸುತ್ತಿದ್ದಳು. ಈ ಬಗ್ಗೆ ವಿಮಲತ್ತೆಯವರು ಏನಾದರೂ ಹೇಳಿದರೆ "ತಂದು ಹಾಕುವವರು ಅವರಿದ್ದಾರೆ, ನಾನು ಮಾಡಿಹಾಕುತ್ತೇನೆ" ಎಂದು ಗಂಡನಿಗೆ ವಕಾಲತ್ತು ವಹಿಸುತ್ತಿದ್ದಳು. ಅಂದರೆ ನಿಷ್ಕಲ್ಮಶ ಮನಸ್ಸಿನ ಹೆಣ್ಣು ಈ ರತ್ನಮ್ಮ ಆಗಿದ್ದರಿಂದ

ತನ್ನ ಆತಿಥ್ಯದಲ್ಲಿ ಯಾವುದೇ ಕುಂದುಕೊರತೆಗಳನ್ನು ನೋಡದೇ ಮನೆಗೆ ಬಂದ ಎಲ್ಲಾ ಅತಿಥಿಗಳನ್ನು ಒಂದೇ ರೀತಿ ಕಾಣುತ್ತಿದ್ದಳು. ಅದು ಭಾರತೀಯ ನಾರಿಯು ತನ್ನ ಆತಿಥ್ಯದಲ್ಲಿ ತೋರಿಸುತ್ತಿದ್ದ ಸಮಾನತೆ.

ಈ ಬಗ್ಗೆ ಯಾರಾದರೂ ಕುಟುಂಬ ನಿರ್ವಹಣೆ ಮಾಡಲು ಬರುವುದಿಲ್ಲ. ಕಂತೆಗೆ ತಕ್ಕನಾದ ಬೊಂತೆ, ಗಂಡನಿಗೆ ತಕ್ಕ ಹೆಂಡತಿ, ಬದುಕುವ ಮಾರ್ಗವೇ ತಿಳಿದಿಲ್ಲವಲ್ಲ ಎಂದು ಹೇಳಿದರೆ ಅದಕ್ಕೆಲ್ಲಾ ರತ್ನಮ್ಮ ನಗುತ್ತಲೇ ಉತ್ತರ ನೀಡುತ್ತಾ "ಅವರು ತುಂಬಾ ಒಳ್ಳೆಯವರು, ಶ್ರೀ ರಾಮಚಂದ್ರನಂಥವರು, ಅವರ ಬಗ್ಗೆ ಏನಾದರೂ ತಪ್ಪು ಮಾತಾಡಿದರೆ ಅವರ ಕೈಹಿಡಿದು ಧರ್ಮ ಪತ್ನಿಯಾಗಿ ಈ ಮನೆಗೆ ಬಂದುದಕ್ಕೆ ಯಾವ ಅರ್ಥವಿಲ್ಲ" ಎಂದು ವಾದಿಸುತ್ತಿದ್ದಳು.

ಹೀಗೆ ಸುಖಸಂಸಾರವಾಗಿ ಸಾಗುತ್ತಿದ್ದ ಈ ಸಮಯದಲ್ಲಿ ಸೀತಾರಾಮು ರತ್ನಮ್ಮರ ಪ್ರೀತಿಯ ಪರಿಣಾಮವಾಗಿ ಒಂದು ಗಂಡು ಮಗು ಜನಿಸಿ, ಅದಕ್ಕೆ ನಾಲ್ಕು ವರ್ಷವೂ ಆಯಿತು. ಹೀಗೆ ಸಾಗುತ್ತಿದ್ದ ಜೀವನದಲ್ಲಿ ಬರಸಿಡಿಲು ಬಡಿದಂತಾಗಿ, ಯಮನ ಕಣ್ಣು ಸೀತಾರಾಮು ಮೇಲೆ ಬಿದ್ದು ಒಂದು ದಿನ ಮಳೆಯಲ್ಲಿ ನೆನೆದು, ವಿಷಮಶೀತ ಜ್ವರಕ್ಕೆ ತುತ್ತಾಗಿ ಕಣ್ಣು ಮುಚ್ಚಿಕೊಂಡ. ಸಾವಿನ ಸಿಡಿಲು ಬಡಿದಾಗ ರತ್ನಮ್ಮನ ಕಣ್ಣು ತೆರೆಯಿತು. ಈ ಮೂಲಕ ಸುಖಸಂಸಾರದಲ್ಲಿ ಸಾವಿನ ಕರಾಳ ಛಾಯೆಯು ಧುಮುಕಿ, ಸಾವು ತನ್ನ ನಾಲಗೆಯನ್ನು ಚಾಚಿ ಸೀತಾರಾಮುವನ್ನು ಬರಮಾಡಿಕೊಂಡ. ತನ್ನ ಗಂಡ ಇನ್ನಿಲ್ಲ ಎಂಬ ದುಃಖವನ್ನು ನೆನೆದುಕೊಂಡರೆ ರತ್ನಮ್ಮಳ ಹೃದಯ ಭಾರವಾಗುತ್ತಿತ್ತು. ಅಂತೂ ಅತೀ ಚಿಕ್ಕವಯಸ್ಸಿನಲ್ಲಿ ವಿಧವೆ ಪಟ್ಟ ಒದಗಿ ದುಃಖದ ಸಮುದ್ರದಲ್ಲಿ ತೇಲುವ ಬಿಳಿಯ ಹಾಳೆಯಂತಾಗಿತ್ತು ರತ್ನಮ್ಮನ ಜೀವನ.

ರತ್ನಮ್ಮ ಅತ್ತೆ-ಮಾವನಷ್ಟೇ ಸಮಾನವಿರುವ ಲಕ್ಷ್ಮಣರಾಯರು ಸೀತಮ್ಮರ ಕಣ್ಮುಂದೆಯೇ ವಿಧವೆಯಾಗಿ ಬಿಳಿ ಬಟ್ಟೆಯನ್ನು ತೊಟ್ಟು ರತ್ನಮ್ಮ ಓಡಾಡುತ್ತಿದ್ದರೆ ಕರುಳು ಕಿತ್ತು ಬರುವಂತಾಗಿತ್ತು. ಆದರೆ ವಿಧಿಯ ಕೈವಾಡದ ಮುಂದೆ ನರಮನುಷ್ಯರ ಯಾವುದೇ ಆಟ ನಡೆಯುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಚಾರವೇ. ಮುಂದೆ ರತ್ನಮ್ಮನನ್ನು ಅವಳ ತವರು ಮನೆಗೆ ಕಳುಹಿಸಲು ಎಲ್ಲರೂ ನಿರ್ಧರಿಸಿದಾಗ ಅದಕ್ಕೆ ರತ್ನಮ್ಮ ಒಪ್ಪದೇ ತನ್ನ ಗಂಡ ವಾಸಿಸಿದ ಮನೆ ದೇವಾಲಯವಿದ್ದಂತೆ. ಅದನ್ನು ಬಿಟ್ಟು ತಾನು ಎಲ್ಲೂ ಕದಲುವುದಿಲ್ಲ ಎಂದು ಹೇಳಿ ತಾನು ಇದೇ ಊರಿನಲ್ಲಿ ಇದ್ದು ಸೀತಾರಾಮುವಿನ ಹೆಂಡತಿ ಎಷ್ಟು ಗಟ್ಟಿಗಿತ್ತಿ ಎಂಬುದನ್ನು ತೋರಿಸಲು ಅದೇ ಊರಿನಲ್ಲಿ ವಾಸಿಸಲು ಮುಂದಾಗುತ್ತಾಳೆ. ಆ ವಿಷಯವಾಗಿ ಭಾರತೀಯ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಹೆಣ್ಣು ವಿಧವೆಯೆಂದರೆ ಸಾಕು, ರಣಹದ್ದುಗಳ ಹಾಗೆ ಕಾದು ಕುಳಿತ ಈ ಪುರುಷ ಪ್ರಧಾನ ವ್ಯವಸ್ಥೆಯ ನಡುವೆ ಗಂಡನನ್ನು ಕಳೆದುಕೊಂಡ ಒಂದು ಅಸಹಾಯಕ ಹೆಂಗಸು ಧೈರ್ಯದಿಂದ ತಾನು ಸಮಾಜದಲ್ಲಿ ಬದುಕಿ ತೋರಿಸುತ್ತೇನೆಂದು ಪಣ ತೊಡುವುದು ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಶ್ಲಾಘನೀಯ.

ಸೀತಾರಾಮುವಿನ ಶಾನುಭೋಗಿಕೆಯನ್ನು ಕಬಳಿಸಲು ವಿಠೋಬನು, ಈರಮ್ಮನು ಹೊಂಚುಹಾಕಿ ಕಾದು ಕುಳಿತಿದ್ದರು, ಸೀತಾರಾಮು ಸತ್ತಾಗ, ಅವರ ಅಂತಿಮ ಕಾರ್ಯ ಮಾಡಲು ಈರಮ್ಮನ ಹತ್ತಿರ ರತ್ನಮ್ಮ ಸಾಲ ತೆಗೆದುಕೊಂಡಿದ್ದಳು. ಇದನ್ನು ತೀರಿಸಲು ತನ್ನ ಗಂಡನ ಶಾನುಭೋಗಿಕೆಯನ್ನು ಬಿಟ್ಟುಕೊಡಬೇಕಾಗಿ ಬಂದಾಗ ತನ್ನ ಅಭಿವೃದ್ಧಿಗೆ ಎಲ್ಲರೂ ಇರುವುದೆಂದು ನಂಬಿ ಅಣ್ಣನ ಸ್ಥಾನದಲ್ಲಿದ್ದ ರಾಘವೇಂದ್ರರಾಯರನ್ನು ಒಂದು ಮಾತೂ ಕೇಳದೆ ಒಪ್ಪಿಗೆ ಸೂಚಿಸುವುದು ರತ್ನಮ್ಮನ ಮುಗ್ಧತೆಗೆ ಹಿಡಿದ ಕೈಗನ್ನಡಿ.

ತಂಗಿಯ ಸ್ಥಾನದಲ್ಲಿದ್ದ ರತ್ನಮ್ಮ ಮತ್ತು ರಾಘವೇಂದ್ರರಾಯರ ಬಗ್ಗೆ ಇಲ್ಲಸಲ್ಲದ ಊಹಾಪೋಹಗಳನ್ನು ಹರಡಿದ ವಿಠೋಬನು ಮತ್ತು ಈರಮ್ಮಳು ಹೇಗಾದರೂ ಮಾಡಿ ರತ್ನಮನನ್ನು ತನ್ನವಳಾಗಿ ಮಾಡಿಕೊಳ್ಳಬೇಕೆಂಬ ಹಂಬಲದಿಂದ ವಿಠೋಬನು ಒಳ್ಳೆಯವನಂತೆ ನಟಿಸಿ ಮೋಸ ಮಾಡಲು ಹವಣಿಸುತ್ತಾನೆ. ಇವರಿಬ್ಬರನ್ನು ನಂಬಿದ ರತ್ನಮ್ಮ ಅಣ್ಣನಂತಿದ್ದ ರಾಘವೇಂದ್ರರಾಯರನ್ನು, ಅವರ ಮನೆಯವರನ್ನು ದೂರ ಮಾಡಿಕೊಳ್ಳುತ್ತಾಳೆ. ಅಂದರೆ ತನ್ನದಲ್ಲದ ತಪ್ಪಿಗೆ ಜೀವನದ ಪ್ರತಿ ಹಂತದಲ್ಲೂ ನೋವನ್ನು ಅನುಭವಿಸುತ್ತಾ ಸಾಗುತ್ತಾಳೆ ರತ್ನಮ್ಮ. ಒಟ್ಟಾರೆ 'ಚಂದನದ ಗೊಂಬೆ' ಕಾದಂಬರಿಯ ಮೂಲಕ ಹೆಣ್ಣು ಅಬಲೆಯಲ್ಲ. ಕಾಲಚಕ್ರಕ್ಕೆ ಸಿಲುಕಿ ಹೆಣ್ಣು ಕೆಲವು ಬಾರಿ ಹಾದಿ ತಪ್ಪುತ್ತಾಳೆಯೇ ವಿನಃ ತಾನು ಮನಸ್ಸು ಮಾಡಿದರೆ ತನಗೆ ಯಾವುದೂ ಅಸಾಧ್ಯವಲ್ಲ, ನೋವಿನ ನಡುವೆಯು ಬೆಳಗುವ ನಂದಾದೀವಿಗೆಯಾಗುತ್ತಾಳೆ ರತ್ನಮ್ಮ.

### .1.6. ಪಾರ್ವತಿ (ಮಸಣದ ಹೂವು)

ತ.ರಾ.ಸು ಅವರ ಕಾದಂಬರಿಗಳಲ್ಲಿ ಬಹಳ ವಿಭಿನ್ನ, ವಿಶೇಷವಾದ ಕಾದಂಬರಿ ಎಂದರೆ ಅದು ಮಸಣದ ಹೂವು. ಇದು ಚಲನಚಿತ್ರವಾಗಿಯೂ ಬಹಳ ಪ್ರಸಿದ್ಧಿಯನ್ನು ಪಡೆದ ಕಾದಂಬರಿ. ಸಾಂದರ್ಭಿಕವಾಗಿ ಇದು ಚಲನಚಿತ್ರವಾಗಿ ಮಾರ್ಪಾಡಾಯಿತು. ತ.ರಾ.ಸು ಹಲವು ಇಂಗ್ಲೀಷ್ ಕಾದಂಬರಿಗಳನ್ನು ಮನನ ಮಾಡಿ ಅವುಗಳನ್ನು ಭಾರತೀಯ ಚೌಕಟ್ಟಿಗೆ ಸಾಮಾಜಿಕ ಸಂರಚನೆಯ ಹಾದಿಯಲ್ಲಿ ನಿರ್ಮಿಸಲು ಪಣ ತೊಟ್ಟರು. ಆ ಮೂಲಕ ರೂಪುಗೊಂಡದ್ದೇ 'ಮಸಣದ ಹೂವು' ಕಾದಂಬರಿ. ಸಂಸ್ಕೃತಿ, ಸಂಪ್ರದಾಯ, ಮಡಿವಂತಿಕೆಯ ಹಿನ್ನೆಲೆಯಲ್ಲಿದ್ದ ಸಮಾಜವು ಇದ್ದಾಗ ಅವುಗಳನ್ನೆಲ್ಲಾ ಸವಾಲಾಗಿ ಸ್ವೀಕರಿಸಿ ಆಡುವವರ ಬಾಯಿ ಮುಚ್ಚುವಂತೆ ತನ್ನ ಕಾದಂಬರಿಯ ಕಥಾ ವೈಶಿಷ್ಟ್ಯತೆಯನ್ನು ನಿರೂಪಿಸಿ ಅಂದಿನ ಕಾಲಘಟ್ಟಕ್ಕೆ ಎಲ್ಲರಿಂದಲೂ ಶಹಬ್ಬಾಷ್ ಹೇಳಿಸಿಕೊಂಡರು.

'ಪಾರ್ವತಿ' ಎಂಬ ಪಾತ್ರವು ಬಹಳ ವಿಭಿನ್ನವಾಗಿದೆ, ವಿಶೇಷವಾಗಿದೆ. ಈ ಪಾತ್ರದ ಮೂಲಕ ವೇಶ್ಯಾವಾಟಿಕೆಯ ಕರಾಳ ಮುಖವನ್ನು ಪರಿಚಯ ಮಾಡಿಕೊಟ್ಟಿದ್ದಾರೆ ತನ್ನದಲ್ಲದ ತಪ್ಪಿಗೆ ವೇಶ್ಯಾವಾಟಿಕೆಯ

ಮಹಾಕೂಪಕ್ಕೆ ಬಿದ್ದ ಪಾರ್ವತಿಯು ಮುಂದೆ ಹೋಗುತ್ತಾ ನಲುಗಿ ಹೋಗಿ ಜೀವನದ ಕರಾಳ ಸತ್ಯವನ್ನು ಅರಿಯುವ ಮೊದಲೇ ಮಹಾಂಧಕಾರದಲ್ಲಿ ಮುಳುಗಿ ಹೋಗಿದ್ದಳು. ಈ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ಪಾರ್ವತಿಯ ಜೀವನವು ಎಡವಿ ಬಿದ್ದು ಸುಸಂಸ್ಕೃತ ಜೀವನದ ಮೇಲೆ ನೆಲೆ ನಿಂತಿದ್ದ ತನ್ನ ಬದುಕು ಸೂತ್ರ ಹರಿದ ಗಾಳಿಪಟದಂತೆ ನೇತಾಡುತ್ತಿದೆ ಎಂದು ಬದುಕಿನ ಕರಾಳ ಸತ್ಯವನ್ನು ಅರಿಯುವ ಮೊದಲೇ ಬದುಕಿನ ಅಂತ್ಯವು ಆರಂಭವಾಗಿತ್ತು.

ಪಾರ್ವತಿ ದೇವಾಂಗದ ರಾಮಯ್ಯನ ಮಗಳು ರೂಪವತಿ ಬದುಕಿನ ಬಗ್ಗೆ ಸಾವಿರಾರು ಆಸೆ ಆಕಾಂಕ್ಷೆಗಳನ್ನು ಹೊಂದಿದ್ದ ಪಾರ್ವತಿಗೆ ತನ್ನ ಬದುಕು ನೆಲೆಗೊಳ್ಳುವ ಮೊದಲೇ ಕಾಡಿನ ಮಾರ್ಗವಾಗಿ ಕಲ್ಲುಮುಳ್ಳುಗಳ ಹಾದಿಯಲ್ಲಿ ಸಾಗುತ್ತದೆಂದು ಬಹುಶಃ ಪಾರ್ವತಿ ಊಹಿಸಿರಲಿಲ್ಲವೇನೋ. ಮತ್ತೊಂದೆಡೆ ಆಗ ಜೊತೆಗೆ ತನ್ನ ಪ್ರೀತಿ ಪ್ರೇಮದ ಸಲುಗೆ ಸಹ ನಡೆಯುತ್ತಿತ್ತು. ಯಾವಾಗ ಸೋಮಣ್ಣನ ದೃಷ್ಟಿಯು ಪಾರ್ವತಿಯ ಮೇಲೆ ಬಿತ್ತೋ ಅವಳನ್ನು ವೇಶ್ಯಾವಾಟಿಕೆಗೆ ತಳ್ಳಬೇಕೆಂದು ಅಂದೇ ನಿರ್ಧರಿಸಿ, ಆಮೂಲಕ ತನ್ನ ವ್ಯವಹಾರವನ್ನು ಹೆಚ್ಚಿಸಿಕೊಳ್ಳಬಹುದೆಂದು ಯೋಚಿಸಿ ಸೌಂದರ್ಯದ ಖನಿಯಂತಿದ್ದ, ಚಿನ್ನದ ಮೊಟ್ಟೆ ಇಡುವ ಕೋಳಿಯಂತೆ ಸೋಮಣ್ಣನ ಕಣ್ಣಿಗೆ ಪಾರ್ವತಿ ಬಿದ್ದಳು. ಅವಳ ಎಲ್ಲಾ ಹಿನ್ನೆಲೆಯನ್ನು ತಿಳಿದುಕೊಂಡ ಸೋಮಣ್ಣ ತನ್ನ ಬತ್ತಳಿಕೆಯಲ್ಲಿದ್ದ ಒಂದೊಂದೇ ಬಾಣವನ್ನು ಪ್ರಯೋಗಿಸತೊಡಗಿದ.

ಸಾಹುಕಾರ ನರಸಿಂಹಾರೆಡ್ಡಿಯ ಕಣ್ಣು ಪಾರ್ವತಿಯ ಸೌಂದರ್ಯದ ಮೇಲೆ ಬಿದ್ದು ಸೋಮಣ್ಣನ ಮೂಲಕ ವ್ಯವಹಾರ ಕುದುರಿಸಲು ಮುಂದಾದ. ಮುಂದೆ ಸೋಮಣ್ಣನು ಪಾರ್ವತಿಯ ಮನೆ ಬಳಿ ಬಂದು ಆಕೆಯ ತಂದೆ ರಾಮಯ್ಯನಿಗೆ ಇರುವ ವಿಷಯ ತಿಳಿಸಿದ. ಇದರಿಂದ ಕೆರಳಿದ ರಾಮಯ್ಯನೂ ಅಸಹಾಯಕನಾಗಿ ಅಂಗಲಾಚಿ ಬೇಡಿ ಎರಡು ದಿನಗಳ ಬಳಿಕ ಸಾಹುಕಾರರ ಮನೆಗೆ ಕಳುಹಿಸಲು ಒಪ್ಪಿದ. ಈ ಮಧ್ಯೆ ತನ್ನ ಮಗಳನ್ನು ನಾಗನ ಜೊತೆ ಎಲ್ಲಾದರೂ ದೂರವಾಗಿ ಕಳುಹಿಸಬೇಕೆಂದು ಯೋಜನೆ ರೂಪಿಸಿ ಆ ಪ್ರಯತ್ನವನ್ನು ಮಾಡಿದ. ಆದರೆ ಇದನ್ನೆಲ್ಲಾ ಮೊದಲೇ ತಿಳಿದಿದ್ದ ಸೋಮಣ್ಣನು ಪಾರ್ವತಿ–ನಾಗನನ್ನು ಹಿಂಬಾಲಿಸಿ ಕಾಡಿನ ಮಧ್ಯೆ ನಾಗನನ್ನು ಕೊಂದು ಪಾರ್ವತಿಯನ್ನು ಸಾಹುಕಾರರ ಕಾಮತೃಪ್ತಿಗೆ ತಳ್ಳಿ, ಹೂವಾಗಿ ದೇವರಪಾದ ಸೇರಬೇಕಿದ್ದ ಪಾರ್ವತಿ, ಸ್ಮಶಾನದ ಹೂವಾಗಿ ಕತ್ತಲ ಕೂಪಕ್ಕೆ ಪಯಣಿಸಿದಳು.

ಮುಂದೆ ಎಲ್ಲವೂ ಪಾರ್ವತಿಯ ಜೀವನದಲ್ಲಿ ಒಂದು ಕನಸಾಗಿ ನಡೆಯುತ್ತಾ ಹೋಯಿತು. ಪಾರ್ವತಿ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ತಾನಾವುದೋ ಕನಸಿನಲ್ಲಿದ್ದಂತೆ ಭಾಸವಾಯಿತು. ಕೋಣೆಯ ಹೊರ ಭಾಗದಲ್ಲಿ ನಾಲ್ಕಾರು ಜನ ಅಪರಿಚಿತರು ಮಾತನಾಡುತ್ತಾ ಕುಳಿತಿದ್ದರು. ಅದು ವೇಶ್ಯಾವಾಟಿಕೆಯ ಅಡ್ಡವಾಗಿತ್ತು. ಬೇಟೆಗಾರನ ಬಾಣಕ್ಕೆ ಸತ್ತ ಪ್ರಿಯನ ವಿರಹ ಶೋಕದ ದಾವಾಗ್ನಿಯಿಂದ ನೊಂದು ಕರುಣೆಯೇ ಮೂಗಾಗಿ ಚೀರಿದ ಕ್ರೌಂಚ ಕನ್ಯೆಯಂತೆ ಪಾರ್ವತಿ ಬಿಕ್ಕಿ ಬಿಕ್ಕಿ ಅತ್ತಳು.

ತನಗೆ ನಿದ್ದೆ ಬರುತ್ತದೆ ಎಂದು ಮಲಗಲು ಅಣಿಯಾದಾಗ ಇನ್ನೆಲ್ಲಿಯ ನಿದ್ದೆ ಕಾಮನ ಹಬ್ಬಕ್ಕೆ ಯಾರಾಗಬೇಕಿದೆ ಎಂದು ಹೇಳಿದಾಗ ಇದರ ಬಗ್ಗೆ ಏನೂ ತಿಳಿಯದ ಪಾರ್ವತಿ ತಾನು ಬೇರೊಂದು ಪ್ರಪಂಚಕ್ಕೆ ಅಡಿಯಿಟ್ಟಿದ್ದೇನೋ ಎಂಬಂತೆ ಆಶ್ಚರ್ಯವಾಗುತ್ತಾ ಸಾಗಿತು. ಕಾಮದ ಅಡ್ಡೆಯ ಒಡತಿಯಾಗಿದ್ದ ಚಿನ್ನಮ್ಮನಿಗೆ ಸೌಂದರ್ಯವೇ ಮೂರ್ತಿಯಂತಿದ್ದ ಪಾರ್ವತಿಯನ್ನು ಹೇಗಾದರೂ ಒಪ್ಪಿಸಿ ಚಿನ್ನದ ಮೊಟ್ಟೆ ಇಡುವ ಕೋಳಿಯಾಗಿಸಿಕೊಳ್ಳಬೇಕೆಂದು ಹಲವು ಪ್ರಯತ್ನಗಳನ್ನು ಮಾಡಿದಳು. ಪಾರ್ವತಿಯನ್ನು ಪಳಗಿಸಲು ಚಿನ್ನಮ್ಮ ಹರಸಾಹಸಪಟ್ಟಳು. ಕಾರಣ ಇದರ ಬಗ್ಗೆ ಎಳ್ಳಷ್ಟೂ ಆಸಕ್ತಿಯಿಲ್ಲದ ಪಾರ್ವತಿಗೆ ತಾನು ಯಾವುದೋ ಜನ್ಮದಲ್ಲಿ ಮಾಡಿದ ಪಾಪವೇ ತನ್ನ ಬೆನ್ನು ಹತ್ತಿದೆ ಎಂದು ಕೊಂಡಳು.

ಪಾರ್ವತಿಗೆ ಅನ್ನ, ನೀರು ನೀಡದೇ ಉಪವಾಸ ಕೆಡವಿದ್ದಕ್ಕೆ ವೇಶ್ಯಾವಾಟಿಕೆ ಮಾಡಲು ಒಪ್ಪಿಕೊಂಡಳು, ಬೇರೆ ವಿಧಿಯಿಲ್ಲದೇ ತನ್ನ ಹೊಟ್ಟೆ ಹೊರೆಯಲು ವೇಶ್ಯೆಯರ ಸಾಲಿಗೆ ತಾನು ಹೊಸ ಸದಸ್ಯಳಾಗಿ ಸೇರ್ಪಡೆಗೊಂಡಳು. ಮುಂದೆ ನಡೆದಿದ್ದೆಲವೂ ಕನಸು. ನಿತ್ಯವೂ ನರಕ ಯಾತನೆ. ಚಿನ್ನಮ್ಮನ ಹೊಗಳಿಕೆಯ ಮಾತುಗಳಲ್ಲಿ ಮೊದಮೊದಲು ಕರಗಿ ಹೋಗಿ ತನ್ನ ಮೈಯನ್ನು ಕಾಮ ಪಿಶಾಚಿಗಳಿಗೆ ನೀಡುತ್ತಿದ್ದ ಪಾರ್ವತಿ, ಇದು ನಿತ್ಯ ನರಕವೆಂದು ತಿಳಿದ ಮೇಲೆ ತನ್ನ ದೇಹವನ್ನು ಮಾಂಸದ ಮುದ್ದೆಯೆಂದು ಭಾವಿಸಿ ಕಿತ್ತು ತಿನ್ನುವ ಗಿಡುಗಗಳಿಗೆ ಆಹಾರವಾಗುತ್ತಾ ಹೋದಳು. ಇದು ನಿತ್ಯ ನಿರಂತರವಾಗಿ ನಡೆದು ಹೋಗುತ್ತಿದ್ದ ಗೋಳಾಗಿದ್ದರಿಂದ ಪಾರ್ವತಿಯು ಮುಂದಿನ ಜೀವನವನ್ನೆಲ್ಲಾ ಆ ವೇಶ್ಯಾವಾಟಿಕೆಯೆಂಬ ಕತ್ತಲ ಕೂಪದಲ್ಲಿ ಬಿದ್ದು ನರಳಲು ಅಣಿಯಾದಳು.

ಮುಂದೆ ನಡೆದಿದ್ದೆಲ್ಲಾ ಆಯೋಮಯ. ಆ ಕಾಮದ ಸಂತೆಯಲ್ಲಿ ಉಸಿರಾಡಿಸಲು ಬಿಡುವಾಗದೆ ನರಳುತ್ತಿರುವವರು ಹಲವರು ಅಲ್ಲಿ ಇದ್ದಾರೆ. ಅಂಥ ಒಂದು ಕರಾಳ ಛಾಯೆಯಲ್ಲಿ ಕೂಡಾ ಪಾರ್ವತಿಯನ್ನು ಪ್ರೀತಿಸುತ್ತಿದ್ದ ಸಿಂಗಾರು. ಈ ಕತ್ತಲ ಕೂಪದಿಂದ ಬಿಡಿಸಿಕೊಂಡು ಎಲ್ಲಾದರೂ ದೂರ ಹೋಗಿ ಉತ್ತಮ ಜೀವನವನ್ನು ಕಟ್ಟಿಕೊಳ್ಳೋಣವೆಂದು ಸಿಂಗಾರು ಹೇಳುತ್ತಿರುತ್ತಾನೆ. ಆದರೆ ಚಿನ್ನಮ್ಮ ಇದಕ್ಕೆಲ್ಲಾ ಸೊಪ್ಪು ಹಾಕದೇ ತನಗೆ ಪಾರ್ವತಿಯಿಂದ ಸಂಪಾದಿಸುವಷ್ಟು ಹಣವನ್ನು ನೀಡಿ ಈ ಬಂಧನದಿಂದ ಬಿಡುಗಡೆಯಾಗಿ ಹೋಗಿ ಎಂದು ಷರತ್ತು ಹಾಕಿದಳು.

ಒಟ್ಟಾರೆ 'ಮಸಣದ ಹೂವು' ಕಾದಂಬರಿಯ ಮೂಲಕ ಪಾರ್ವತಿಯು ಮಸಣದಲ್ಲಿ ಇದ್ದರೂ ಅವಳು ದೇವರ ಪಾದ ಸೇರಬೇಕಾದ ಹೂವು. ದೈಹಿಕವಾಗಿ ಪಾರ್ವತಿ ಕೆಟ್ಟು ಹೋಗಿದ್ದರೂ ಮಾನಸಿಕವಾಗಿ ಪವಿತ್ರಳಾಗೇ ಇದ್ದಳು. ಹಾಗೆಯೇ ಸಿಂಗಾರುವಿಗೆ ತನ್ನ ಸ್ಥಿತಿಯನ್ನು ತಿಳಿಸಿ ಹೇಳಿ ತನ್ನಿಂದ ನಿನ್ನ ಬದುಕಿಗೆ ಯಾವುದೇ ಪ್ರಯೋಜನವಿಲ್ಲ ಎಂದಳು. ಈ ಮೂಲಕ ವೇಶ್ಯವಾಟಿಕೆಯೆಂಬ ಕರಾಳಕೂಪದಲ್ಲಿ ಬಿದ್ದ ಪಾರ್ವತಿ ತಾನು ದೇವರ ಪಾದಕ್ಕೆ ಮೀಸಲಾದ ಹೂವೇ ಆಗಿದ್ದವಳು.

## ಪುರುಷ ಪಾತ್ರಗಳು

### 4.2.1 ಗೋಪಾಲಕೃಷ್ಣ (ಪಂಜರದ ಪಕ್ಷಿ)

ತ.ರಾ.ಸು ರವರ 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಕೋಮಲಾಳಷ್ಟೇ ಬಹುಮುಖ್ಯ ಪಾತ್ರ ವಹಿಸುವ ಪಾತ್ರವೆಂದರೆ ಗೋಪಾಲಕೃಷ್ಣ. ಇಲ್ಲಿ ಗೋಪಾಲಕೃಷ್ಣನ ಪಾತ್ರವು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಾಮಾಜಿಕ ಸಂರಚನೆಯ ಸಂದರ್ಭದ ಒಳಗೆ ಒಂದು ರೀತಿಯ ಸಮಾನತೆಯ ಹರಿಕಾರನಾಗಿ ಕಾಣಿಸಿಕೊಳ್ಳುತ್ತದೆ. ಕಾರಣ ಇಲ್ಲಿ ಗೋಪಾಲಕೃಷ್ಣನ ಪಾತ್ರವೇ ವಿಶೇಷವಾಗಿ ಪ್ರಗತಿಶೀಲ ಸಾಹಿತ್ಯದಲ್ಲಿನ ಹೆಣ್ಣನ್ನು ಕೀಳಾಗಿ ಕಾಣುವ, ಕನಿಷ್ಠವೆಂದು ಭಾವಿಸುವ ಸಾಮಾಜಿಕ ವ್ಯವಸ್ಥೆಯಲ್ಲಿ ಗೋಪಾಲಕೃಷ್ಣನು ಅದಕ್ಕೆ ತದ್ವಿರುದ್ಧವಾಗಿ ಪಾಶ್ಚಾತ್ಯ ಸಂಸ್ಕೃತಿಯಲ್ಲಿರುವ ಹಾಗೆ ಹೆಣ್ಣು-ಗಂಡಿನ ನಡುವೆ ಯಾವುದೇ ಬೇಧವಿಲ್ಲವೆನ್ನುವ ಸಮಾನತೆಯನ್ನು ಸಾಧಿಸಲು ಹಂಬಲಿಸುವ ಭಾರತೀಯ ಸಂಸ್ಕೃತಿ, ಸಂಪ್ರದಾಯ, ಮಡಿವಂತಿಕೆಯ ಜಾಡಿನಲ್ಲಿ ಹೆಣ್ಣು-ಗಂಡಿನ ನಡುವೆ ಕಂದಕವನ್ನು ಏರ್ಪಡಿಸಿರುವ ಸಮಾಜಕ್ಕೆ ಧಿಕ್ಕಾರವಿರಲಿ ಎನ್ನುವಂತೆ ಅವನ ಮನೋಭಾವವಿದೆ. ವಿಶಾಲವಾಗಿ ಯೋಚಿಸುವ ವ್ಯಕ್ತಿಯಾಗಿ, ಗಂಡಿನಷ್ಟೇ, ಹೆಣ್ಣಿಗೂ ಸಮಾನ ಅವಕಾಶಗಳು ಎಲ್ಲಾ ರಂಗದಲ್ಲಿಯೂ ಸಿಗಬೇಕೆನ್ನುವ ಹಂಬಲದೊಂದಿಗೆ ಹೆಣ್ಣನ್ನು ಎರಡನೇ ದರ್ಜೆಯಲ್ಲಿ ನೋಡಬಾರದೆನ್ನುವ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅದನ್ನು ಪ್ರತಿಭಟಿಸಬೇಕೆನ್ನುವ ವ್ಯಕ್ತಿಯಾಗಿ ಇಲ್ಲಿ ಗೋಪಾಲಕೃಷ್ಣ ಕಾಣಿಸಿಕೊಳ್ಳುತ್ತಾನೆ.

ತಂದೆ ಗೋವಿಂದರಾಯರು ತಮ್ಮ ಮಗ ಗೋಪಾಲಕೃಷ್ಣನು ಕೆಲಸಕ್ಕೆ ಬಾರದ ವಿಷಯಗಳನ್ನೆ ಮಾಡುತ್ತಿರುತ್ತಾನೆ. ಕಾದಂಬರಿ ಓದುವುದು, ಹಾಡು ಹೇಳುವುದು, ಚಿತ್ರವನ್ನು ಬರೆಯುವುದು ಹೀಗೆ ಹೆಂಗಸರಿಗೆ ಸಂಬಂಧಪಟ್ಟ ಕೆಲಸಗಳಲ್ಲಿ ನಿರತನಾಗಿರುತ್ತಾನೆಯೇ ವಿನಃ ಗಂಡಸರು ಮಾಡುವ ಕೆಲಸಗಳನ್ನು ಮಾಡುವುದಿಲ್ಲವೆಂದು ಅಸಮಾಧಾನ ವ್ಯಕ್ತಪಡಿಸುತ್ತಾರೆ. ಆದರೆ ಗೋಪಿಟ್ಟಿಯು ತನ್ನ ತಂದೆಯು ತನ್ನ ಬಗ್ಗೆ ಇದ್ದ ಮನೋಭಾವನೆಯನ್ನು ಹುಸಿ ಮಾಡಿ ತನ್ನ ಜಾಣ್ಮೆಯಿಂದ ಫ್ರೀಷಿಪ್, ಹಾಫ್ ಫ್ರೀಷಿಪ್‌ಗಳನ್ನು ದೊರಕಿಸಿಕೊಂಡು ಸಂಸಾರಕ್ಕೆ ಹೊರೆಯಾಗದೇ ಎಸ್.ಎಸ್.ಎಲ್.ಸಿ.ಯನ್ನು ಮುಗಿಸಿ ಕಾಲೇಜನ್ನು ಸೇರಿ ಅಲ್ಲೂ ಎಲ್ಲಾ ಲೆಕ್ಚರರ್, ಪ್ರೊಫೆಸರ್‌ಗಳಿಗೆ ಅಚ್ಚುಮೆಚ್ಚಿನ ಶಿಷ್ಯನಾಗುತ್ತಾನೆ. ಈ ಮೂಲಕ ಯಾವುದೇ ತಂದೆ-ತಾಯಿಗಳು ತಮ್ಮ ಮಕ್ಕಳ ಮೇಲೆ ಪೂರ್ಣ ಪ್ರಮಾಣದ ನಂಬಿಕೆ, ಭರವಸೆಗಳನ್ನು ಇಡಬೇಕು. ಆಗ ಮಾತ್ರ ಯಾವುದೇ ಮಕ್ಕಳು ಯಾರೂ ಊಹಿಸಲಾಗದ ಮಟ್ಟಕ್ಕೆ ತಾವು ಬೆಳವಣಿಗೆಯಾಗುತ್ತಾರೆ. ತಮ್ಮ ಗುರಿಯನ್ನು ತಲುಪುತ್ತಾರೆ.

ಕಾಲೇಜಿನಲ್ಲಿ ವಾರ್ಷಿಕೋತ್ಸವ ಸಮಾರಂಭದಲ್ಲಿ ಹಾಡುಗಾರಿಕೆಗೆ ಪ್ರಥಮ ಸ್ಥಾನ ಬಂದಾಗ ಸ್ವತಃ ಗೋವಿಂದರಾಯರೇ ಆಶ್ಚರ್ಯಚಕ್ಕಿತರಾಗಿದ್ದರು. ಕನ್ನಡದ ಖ್ಯಾತ ಕವಿ ಬೇಂದ್ರೆಯವರ ಪದ್ಯವನ್ನು ಹಾಡಿ

ಬಹುಮಾನ ಪಡೆದಾಗ ಆ ಹಾಡು ಹಾಡುವಂತೆ ತಾಯಿ ಕನಕಮ್ಮನವರು ಒತ್ತಾಯಿಸಿದ್ದರು. ಮುಂದೆ ತಾಯಿಯ ಒತ್ತಾಯಕ್ಕೆ ಮಣಿದು ಗೋಪಿಟ್ಟಿಯು 'ಮುಂದೇನೇ ಸಖಿ, ಮುಂದೇನೇ' ಎಂದು ರಾಧಾಕೃಷ್ಣ ಹಾಡನ್ನು ಆರಂಭಿಸಿದ. ಆಗ ಆ ಹಾಡನ್ನು ಕೋಮಲೆ ಕಲಿತುಕೊಳ್ಳುತ್ತೇನೆ ಎಂದಾಗ ತಾಯಿ ಕನಕಮ್ಮ ಅವಳನ್ನು ಬೈದಾಗ ಗೋಪಾಲಕೃಷ್ಣನು ಅದಕ್ಕೆ ಕೋಮಲೆಗೂ ಆ ಹಾಡು ಇಷ್ಟವೆಂದು, ಆಕೆಯು ಚೆನ್ನಾಗಿ ಹಾಡುತ್ತಾಳೆಂದು ಮುಂದೆ ಸಂಗೀತಾಭ್ಯಾಸವನ್ನು ಕೋಮಲೆಯು ಮಾಡಬೇಕೆಂದು ತಾಯಿಯ ನಿರಾಕರಣೆಯ ನಡುವೆಯೇ ತನ್ನ ತಂಗಿಗೂ ತನ್ನಂತೆಯೇ ಸಮಾನ ಹಕ್ಕು ಸಿಗಬೇಕೆಂದು ಆಧುನಿಕ ಸಂಸ್ಕೃತಿಯ ಹಿನ್ನೆಲೆಯಲ್ಲಿ ಪ್ರತಿಭಟಿಸುತ್ತಾನೆ.

ಭಾರತೀಯ ಸಾಮಾಜಿಕ ಸಂರಚನೆ ಆಗಿರುವುದೇ ಕೌಟುಂಬಿಕ ವ್ಯವಸ್ಥೆಯ ಮೇಲೆ. ಈ ಹಿನ್ನೆಲೆಯಲ್ಲಿ ಗೋಪಾಲಕೃಷ್ಣನು ಬಿ.ಎ. ಮುಗಿದ ತಕ್ಷಣವೇ ತನ್ನ ತಾಯಿಯನ್ನು ಮಹಾರಾಣಿಯಾಗಿ ನೋಡಿಕೊಳ್ಳುವುದಾಗಿ, ಮುಂದಿನ ಸಂಸಾರದ ಎಲ್ಲಾ ಹೊಣೆಯು ತನ್ನದೇ ಎನ್ನುತ್ತಾ ತನ್ನ ವಿದ್ಯಾಭ್ಯಾಸ ಮುಗಿದ ತಕ್ಷಣವೇ ಮನೆಯ ಎಲ್ಲಾ ಸದಸ್ಯರನ್ನು ತಾನೇ ಸಾಕುವುದಾಗಿ, ಬಡತನಕ್ಕೆ ಪೂರ್ಣ ವಿರಾಮ ಹಾಕುತ್ತೇನೆಂದು ಹೇಳುತ್ತಾನೆ. ಹಾಗೆಯೇ ತಾಯಿ ಕನಕಮ್ಮನವರು ಕೋಮಲೆಗೆ ಹನ್ನೆರಡು ವರ್ಷ ತುಂಬಿದ್ದು ಶಾಲೆಗೆ ಹೋಗದೇ ಮನೆಯ ಕೆಲಸಗಳನ್ನು ಮಾಡಿಕೊಳ್ಳಲು ತಯಾರಾಗು ಎಂದಾಗ ಗೋಪಾಲಕೃಷ್ಣನು ಅದಕ್ಕೆ ನಿರಾಕರಿಸಿ ಹೆಣ್ಣನ್ನು ಕಡೆಗಣ್ಣಿಂದ ಕಾಣುವ ಕಾಲ ದೂರವಾಗಬೇಕು. ಈ ವಯಸ್ಸಿಗೆ ಮದುವೆ ಮಾಡುವುದು ಬೇಡ. ಕೋಮಲೆ ವಿದ್ಯಾಭ್ಯಾಸ ಮುಂದುವರಿಸಬೇಕು ಮತ್ತು ಉನ್ನತ ಶಿಕ್ಷಣ ಪಡೆದು ಸಮಾಜದಲ್ಲಿ ಆಕೆಯು ಉನ್ನತ ಸ್ಥಾನಕ್ಕೆ ಹೋಗಬೇಕೆಂದು ಗೋಪಾಲಕೃಷ್ಣನ ಆಸೆಯಾಗಿದೆ. ಆದರೆ ತಾಯಿ ಕನಕಮ್ಮನವರು ಹಳೆಯ ಕಾಲದ ಗೊಡ್ಡು ಸಂಪ್ರದಾಯದ ನೆಪ ಹೇಳಿ ಯಾವುದೇ ಕಾರಣಕ್ಕೂ ಕೋಮಲೆ ಉನ್ನತ ಶಿಕ್ಷಣ ಪಡೆಯುವಂತಿಲ್ಲ. ಮನೆಯ ಚಾಕರಿಗಳನ್ನು ಕಲಿತುಕೊಂಡು ಗಂಡನ ಮನೆಯಲ್ಲಿ ತವರು ಮನೆಯ ಮರ್ಯಾದೆ ಕಳೆಯದಂತೆ ನೋಡಿಕೊಳ್ಳುವುದು. ಇದು ಭಾರತೀಯ ಮಧ್ಯಮ ವರ್ಗದ ತಾಯಿಯ ಮನೋವ್ಯವಸ್ಥೆಯನ್ನು ತೋರಿಸುತ್ತದೆ. ಆದರೆ ಇಲ್ಲಿ ಗೋಪಾಲಕೃಷ್ಣ ಇದನ್ನು ವಿರೋಧಿಸಿ ಹೆಣ್ಣು-ಗಂಡಿನ ನಡುವೆ ಸಮಾನತೆಯನ್ನು ತರುವ ಹಂಬಲವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಗೋಪಾಲಕೃಷ್ಣನು ಪಾಶ್ಚಾತ್ಯ ಸಾಹಿತ್ಯವನ್ನು ಅಭ್ಯಾಸ ಮಾಡಿದ್ದು ಆಧುನಿಕ ಸಮಾಜದ ಹಿನ್ನೆಲೆಯಲ್ಲಿ ಎಲ್ಲರನ್ನೂ ಒಂದೇ ರೀತಿ ಕಾಣಬೇಕೆಂದು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಈ ಮಾದರಿಯ ಲಿಂಗ ತಾರತಮ್ಯ, ಲಿಂಗ ಅಸಮಾನತೆಗಳು ಇಲ್ಲ. ಇದು ಭಾರತಕ್ಕೂ ವಿಸ್ತರಿಸಿದರೆ ಸಾವಿರಾರು ವರ್ಷಗಳಿಂದ ಸಾಂಪ್ರದಾಯಿಕವಾಗಿ ಬಳಕೆಯಲ್ಲಿರುವ ಪುರುಷ ಪ್ರಧಾನ ವ್ಯವಸ್ಥೆಯನ್ನು ತಡೆಯಬಹುದಾಗಿದೆ. ಗೋಪಾಲಕೃಷ್ಣನ ಪ್ರಕಾರ ಎಲ್ಲಿಯವರೆಗೂ ಭಾರತೀಯ ಹೆಣ್ಣಿಗೆ ಪೂರ್ಣ ಸ್ವಾತಂತ್ರ್ಯ ದೊರೆಯುವುದಿಲ್ಲವೋ ಹೆಣ್ಣು ಎಲ್ಲಾ ರೀತಿಯಲ್ಲೂ ಹಿಂದುಳಿಯುತ್ತಾಳೆ.

ಭಾರತೀಯ ಸಮಾಜವು ಹೀಗೆಯೇ ಸಾಗಿದರೆ ಮುಂದುವರಿಯಲು, ಅಭಿವೃದ್ಧಿ ಕಾಣಲು ಸಾಧ್ಯವಿಲ್ಲ ಎಂಬುದಾಗಿದೆ.

ಅದೊಂದು ದಿನ ಭಾನುವಾರ, ಕೋಮಲೆ ಗೋಪಾಲಕೃಷ್ಣ ಇಬ್ಬರಿಗೂ ಶಾಲಾ-ಕಾಲೇಜು ರಜೆ ಇದ್ದ ಕಾರಣ 'ಪ್ಲಾಜಾ ಟಾಕೀಸ್'ನಲ್ಲಿ ಸಿನಿಮಾ ನೋಡಿಕೊಂಡು ಸಂಜೆ ಹೊತ್ತಿಗೆ ಮರಿನಾ ಬೀಚ್ ಹತ್ತಿರ ಹೋದರು. ಅಲ್ಲಿ ಲಕ್ಷಾಂತರ ಮಂದಿ ಒಂದೆಡೆ ಸೇರಿ ಭಾಷಣ ನಡೆಯುತ್ತಿತ್ತು. ಅಲ್ಲಿಗೆ ಹೋಗೋಣವೆಂದು ಕೋಮಲೆ ಹೇಳಿದಾಗ ನಿರಾಕರಿಸಿದ ಗೋಪಾಲಕೃಷ್ಣ. ಅವಳ ಒತ್ತಾಯಕ್ಕೆ ಮಣಿದು ಅಲ್ಲಿಗೆ ಹೋದ ನಂತರ ಅಲ್ಲಿಂದ ಹೊರಡಲು ಗೋಪಿಟ್ಟಿಗೆ ಮನಸ್ಸಾಗಲಿಲ್ಲ. ಏಕೆಂದರೆ ಅಲ್ಲಿ ಪ್ರಜಾಪ್ರಭುತ್ವದ ರಕ್ಷಣೆಯ ಬಗ್ಗೆ ಭಾಷಣ ನಡೆಯುತ್ತಿತ್ತು. 'ಪ್ರಜಾಪ್ರಭುತ್ವಕ್ಕೆ ಅಪಾಯ ಬಂದಿದೆ'. ಬಂಡವಾಳಶಾಹಿ ಸಾಮ್ರಾಜ್ಯಶಾಹಿಗಳೊಂದಿಗೆ ಕಮ್ಯುನಿಸ್ಟ್ ಸರ್ವಾಧಿಕಾರವೂ ಪ್ರಜಾಪ್ರಭುತ್ವವನ್ನು ಕಬಳಿಸಲು ಸಿದ್ಧವಾಗುತ್ತಿದೆ. ಒಂದು ವೇಳೆ ಪ್ರಜಾಪ್ರಭುತ್ವ ಅಳಿದಲ್ಲಿ ಹಿಂದೂಸ್ಥಾನ ನಿರೂಪದವಾಗಿ ಉಳಿಯಲಾರದು ಎಂದು ಹೇಳುತ್ತಿದ್ದ ಭಾಷಣಕಾರರ ಭಾಷಣ ಕೇಳಿ ಕೋಮಲೆಗೆ ಅಲ್ಲಿಂದ ಎದ್ದು ಹೋದರೆ ಸಾಕು ಎಂಬ ಮನೋಸ್ಥಿತಿ ಆಗಿರುತ್ತದೆ.

ಆದರೆ ಪ್ರಜಾಪ್ರಭುತ್ವದ ವಿಚಾರದ ಮೇಲೆ ನಡೆಯುತ್ತಿದ್ದ ಭಾಷಣದ ರುಚಿ ಹತ್ತಿದ ಗೋಪಿಟ್ಟಿಗೆ ಕೇಳುವ ಕುತೂಹಲ ಅಧಿಕವಾಗುತ್ತಾ ಹೋಯಿತು. ಆದರೆ ಕೋಮಲೆಗೆ ಇದು ಬಹಳ ಬೇಜಾರಾಗಿ ಕಪ್ಪೆ ವಟಗುಟ್ಟುವ ಹಾಗೆ ಇದೆ ಎಂದು ಹೇಳಿದಾಗ ಗೋಪಿಟ್ಟಿಯು ಅದನ್ನು ವಿವರಿಸುವ ಕೆಲಸ ಮಾಡುತ್ತಾನೆ. ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಭಾರತೀಯ ಸಂವಿಧಾನವು "ಪ್ರಜಾಪ್ರಭುತ್ವಕ್ಕೆ" ಎಷ್ಟರ ಮಟ್ಟಿಗೆ ಮನ್ನಣೆ ನೀಡಿದೆ ಎಂಬುದನ್ನು ವಿವರಿಸುತ್ತಾನೆ. ಪ್ರಜಾಪ್ರಭುತ್ವವು ಸಾಮಾನ್ಯ ಜನರು ಉಸಿರು. ಅದು ಹೋದರೆ ಸಾಮಾನ್ಯ ಜನರ ಬಾಳು ನಾಯಿ ಬಾಳು ಎಂದು ವಿವರಿಸುತ್ತಾ ಇತರೆ ಮಾದರಿಯ ಸರ್ಕಾರಗಳಿದ್ದರೆ ಅಂದರೆ ಸರ್ವಾಧಿಕಾರತ್ವ, ಮಿಲಿಟರಿ, ಕಮ್ಯೂನಿಸ್ಟ್ ಸರ್ಕಾರಗಳಲ್ಲಿ ಪ್ರಜಾಪ್ರಭುತ್ವದಂಥ ಉನ್ನತ ಮಟ್ಟದ ಸ್ವಾತಂತ್ರ್ಯವು ಇರುವುದಿಲ್ಲ ಎಂದು ಪ್ರಜಾಪ್ರಭುತ್ವದ ಮಹತ್ವವನ್ನು ಸಾರುತ್ತಾರೆ.

ಗೋಪಾಲಕೃಷ್ಣನ ಪ್ರಕಾರ ಪ್ರಜಾಪ್ರಭುತ್ವ ಎಂದರೆ ಮನಸ್ಸಿಗೆ ಬಂದ ಹಾಗೆ ಆಳುತ್ತಿದ್ದ ದೊರೆಗಳ ರಾಜ್ಯವಲ್ಲ. ಎಲ್ಲರನ್ನು ಸುಲಿದು ತಿನ್ನುವ ಕೊಬ್ಬಿದ ಪರಕೀಯರ ಆಳ್ವಿಕೆಯಲ್ಲ. ಇದು ಜನಸಾಮಾನ್ಯರ ಸರ್ಕಾರ. ಅಮೇರಿಕಾ ದೇಶದ ಮಾಜಿ ಅಧ್ಯಕ್ಷ ಅಬ್ರಹಾಂ ಲಿಂಕನ್. ಭಾರತದ ಗಾಂಧಿ, ನೆಹರು ಇದ್ದ ಹಾಗೆ ಅವರ ಪ್ರಕಾರ ಪ್ರಜೆಗಳಿಂದ ಪ್ರಜೆಗಳಿಗಾಗಿ, ಪ್ರಜೆಗಳೇ ನಡೆಸುವ ಅಧಿಕಾರವೇ ಪ್ರಜಾಪ್ರಭುತ್ವವಾಗಿದೆ. ಹಾಗೆಯೇ "ಕೊಬ್ಬಿದ ಸಾಹುಕಾರರ ಬೊಜ್ಜು, ಹೊಟ್ಟೆ, ಭೂರಿ ಭೋಜನ ಮಾಡಿಸುವುದಲ್ಲ, ಸುಪ್ಪತ್ತಿಗೆ ಮೇಲೆ ಮಲಗುವವರ ಯಜಮಾನಿಕೆ ಸ್ವತ್ತಲ್ಲ, ಸಾಮಾನ್ಯ ಮನುಷ್ಯನ ಅತ್ಯಲ್ಪ ಬಯಕೆಯೂ ಅಪೂರ್ಣವಾಗಿ ಉಳಿದು, ಅವನ ಬಾಳು ಬರಡಾಗದಂತೆ ಎಚ್ಚರಿಕೆ ವಹಿಸುವುದೇ ಪ್ರಜಾಪ್ರಭುತ್ವ

ಮೇಲಿನ ಅಂಶಗಳ ಮೂಲಕ ತ.ರಾ.ಸು. ಇಲ್ಲಿ ಪ್ರಗತಿಶೀಲ ಸಾಹಿತ್ಯದ ಮೂಲ ಉದ್ದೇಶವನ್ನು ಗೋಪಿಟ್ಟಿ ಪಾತ್ರದ ಮೂಲಕ ಹೇಳ ಬಯಸಿದ್ದಾರೆ. ಏಕೆಂದರೆ ಮಾರ್ಕ್ಸಿಸಂ ತತ್ವದ ಆಧಾರದ ಮೇಲೆ ಬಂದ ಪ್ರಗತಿಶೀಲ ಸಾಹಿತ್ಯ ಹೇಳುವುದು ಬಡವರ, ಶ್ರಮಿಕರ ಬಾಳು ಹಸನಾಗುವ ಉದ್ದೇಶದಿಂದಲೇ ಈ ಸಾಹಿತ್ಯ ಪ್ರಕಾರ ಸೃಷ್ಟಿಯಾದುದು. ಬಂಡವಾಳಶಾಹಿಗಳ ವಿರುದ್ಧ ಶ್ರಮಿಕರ ಪರವಾಗಿ ನೆಲೆನಿಂತ ಸಾಹಿತ್ಯವೇ ಪ್ರಗತಿಶೀಲ. ಆದ್ದರಿಂದ ಸೂಚ್ಯವಾಗಿ ಭಾರತೀಯ ಮಧ್ಯಮ ವರ್ಗದ ಕುಟುಂಬಗಳಿಗೆ ಸಿಗಬೇಕಾದ ನ್ಯಾಯವನ್ನು ಪ್ರಜಾಪ್ರಭುತ್ವದ ಮೂಲಕ ಮಾತ್ರ ಕೊಡಲು ಸಾಧ್ಯವೇ ಹೊರತು ಬೇರೊಂದು ಸರ್ಕಾರದಿಂದ ಸಾಧ್ಯವಿಲ್ಲ ಎಂಬುದನ್ನು ತಿಳಿಸುತ್ತದೆ. ಈ ಮೂಲಕ ಪ್ರಜಾಪ್ರಭುತ್ವದ ಮಹತ್ವವನ್ನು ವಿದ್ಯಾವಂತನಾದ ಗೋಪಾಲಕೃಷ್ಣನ ಮೂಲಕ ಹೇಳಿಸಿದ್ದು ತ.ರಾ.ಸು. ರವರ ಕಾದಂಬರಿಯ ಮೂಲ ಉದ್ದೇಶವನ್ನು ಪ್ರತಿಪಾದಿಸುತ್ತದೆ.

ಈ ಕಾದಂಬರಿಯಲ್ಲಿ 'ಗೋಪಾಲಕೃಷ್ಣ' ಪಾತ್ರವು ಅರ್ಧದಲ್ಲೆ ಸತ್ತುಹೋದರೂ ಕೂಡಾ ಕಾದಂಬರಿಯ ಮೂಲ ಉದ್ದೇಶವನ್ನು ತಿಳಿಸಲು ಅದರ ಓಟಕ್ಕೆ ಟಾನಿಕ್ ನೀಡುವಂತೆ ಅಲ್ಲಲ್ಲಿ ಬಡತನದಲ್ಲಿ ನರಳುತ್ತಿರುವ ಆ ಕುಟುಂಬಕ್ಕೆ ತನ್ನ ಶಿಕ್ಷಣ ಮುಗಿಸಿ ಇಡೀ ಮನೆಯ ಜವಾಬ್ಧಾರಿಯನ್ನು ಹೊತ್ತುಕೊಳ್ಳುವ ಭಾರತೀಯ ಮಧ್ಯಮ ವರ್ಗದ ಹುಡುಗನಾಗಿ ಕಾಣಿಸಿಕೊಳ್ಳುವುದರ ಮುಖಾಂತರ ಸಾಮಾಜಿಕ ಸಂರಚನೆಯಲ್ಲಿ ಶಿಕ್ಷಣವು ಅತ್ಯಂತ ಮಹತ್ವವೆನ್ನುವುದನ್ನು ತಿಳಿಸುತ್ತದೆ. ಲಿಂಗ ತಾರತಮ್ಯದ ವಿರುದ್ಧ ಧ್ವನಿ ಎತ್ತುವ ಗೋಪಾಲಕೃಷ್ಣ ತನ್ನ ಮನೆಯಲ್ಲೆ ತಾಯಿಯ ವಿರುದ್ಧ ಪ್ರತಿಭಟಿಸುತ್ತಾನೆ. ಒಟ್ಟಾರೆ ಈ ಪಾತ್ರದ ಮೂಲಕ ನವಭಾರತದ ಕನಸು ಹೊತ್ತ ಯುವಕನಾಗಿ ಗೋಪಾಲಕೃಷ್ಣ ಕಾಣಿಸಿಕೊಳ್ಳುತ್ತಾನೆ.

### 4.2.2. ಗೋವಿಂದರಾಯ (ಪಂಜರದ ಪಕ್ಷಿ)

ತ.ರಾ.ಸು. ರವರ 'ಪಂಜರದ ಪಕ್ಷಿ' ಕಾದಂಬರಿಯಲ್ಲಿನ ಮತ್ತೊಂದು ಮುಖ್ಯ ಪುರುಷ ಪಾತ್ರವೆಂದರೆ ಗೋವಿಂದರಾಯರು. ಈ ಪಾತ್ರವು ಕಾದಂಬರಿಯಲ್ಲಿ ಮಧ್ಯಮ ವರ್ಗದ ಗಂಡಸಿನ ಸ್ಥಿತಿಗತಿಯನ್ನು ವಿವರಿಸುತ್ತಾ ಹೋಗುತ್ತದೆ. ತಾನು ನಿರುದ್ಯೋಗಿಯಾದರೂ ಕೂಡಾ ತನ್ನ ಹೆಂಡತಿ ಕನಕಮ್ಮ, ಮಗಳು ಕೋಮಲಾಳನ್ನು ತನ್ನ ಹದ್ದುಬಸ್ತಿಯನಲ್ಲಿಡುವ ಆ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಧೋರಣೆಯನ್ನು ವ್ಯಕ್ತಪಡಿಸುವ ಪಾತ್ರವನ್ನು ಗೋವಿಂದರಾಯರು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಮನೆಯ ಯಜಮಾನನಾಗಿ ಕಾರ್ಯನಿರ್ವಹಿಸಿದರೂ ಮನೆಯ ಜವಾಬ್ಧಾರಿಯನ್ನು ತನ್ನ ಮಗಳ ಹೆಗಲ ಮೇಲೆ ಹಾಕಿ ತಾನು ಆ ಹೊಣೆಯಿಂದ ನುಣುಚಿಕೊಳ್ಳುವ ಕೆಲಸವನ್ನು ಗೋವಿಂದರಾಯರು ಮಾಡುತ್ತಾರೆ. ಸಂಪ್ರದಾಯದ ಕೆಸರಿನಲ್ಲಿ ಹೆಣ್ಣು ಮಗಳನ್ನು ಬೇಗ ಮದುವೆ ಮಾಡಿ ತಂದೆ-ತಾಯಿಯಾಗಿ ತಮ್ಮ ಜವಾಬ್ಧಾರಿ ಅದನ್ನು ತಾವು

ಮಾಡಬೇಕೆಂದು ಕನಕಮ್ಮ ಹೇಳಿದರೆ, ಮಗಳನ್ನು ಕೆಲಸಕ್ಕೆ ಸೇರಿಸುವ ವಿಷಯದಲ್ಲೂ ಕನಕಮ್ಮ ಎಷ್ಟೇ ಹೇಳಿದರೂ ಅನಿವಾರ್ಯ ಪರಿಸ್ಥಿತಿಯಲ್ಲಿ ತನ್ನ ಹೆಂಡತಿ ಮಾತನ್ನು ಧಿಕ್ಕರಿಸಿ ಮಗಳನ್ನು ಕೆಲಸಕ್ಕೆ ಕಳುಹಿಸುವಲ್ಲಿಯು ಯಶಸ್ವಿಯಾಗುತ್ತಾನೆ. ಹಾಗಾಗಿ ಈ ಪಾತ್ರವು ಕಾದಂಬರಿಯ ಓಘವನ್ನು ತುಂಬಾ ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಉತ್ತಮ ಲಹರಿಯಲ್ಲಿ ಮುಂದೆ ಸಾಗುತ್ತದೆ.

ಕಾದಂಬರಿಯ ಆರಂಭದಲ್ಲಿ ಮನೆಯ ಒಂದು ಕೋಣೆಯ ಮೂಲೆಯಲ್ಲಿ ಕೆಮ್ಮುತ್ತಾ, ಗೂರುತ್ತಾ ಕುಳಿತಿರುವ ಗೋವಿಂದರಾಯರು ಮಗಳು ಕೆಲಸ ಮುಗಿಸಿ ಮನೆಗೆ ಬಂದಾಗ ಅವಳಿಗೆ ತೊಂದರೆ ಕೊಡುತ್ತಿದ್ದ ಮಕ್ಕಳನ್ನು ಗದರಿಸಿ ಓಡಿಸಿ ಅವಳಿಗೆ ವಿಶ್ರಾಂತಿ ತೆಗೆದುಕೊಳ್ಳಲು ಅನುವು ಮಾಡಿಕೊಡುತ್ತಾರೆ.

ಭಾರತೀಯ ಮಧ್ಯಮ ವರ್ಗದ ಕೌಟುಂಬಿಕ ವ್ಯವಸ್ಥೆಯಲ್ಲಿ ನೊಂದು ಬೆಂದ ಎಷ್ಟೋ ಕುಟುಂಬಗಳ ಪ್ರತಿನಿಧಿಯಾಗಿ ಗೋವಿಂದರಾಯರ ಕುಟುಂಬ ಕಾಣಿಸಿಕೊಳ್ಳುತ್ತದೆ. ಇಲ್ಲಿ ತಮ್ಮ ಮಗ ಗೋಪಾಲಕೃಷ್ಣ ಯಾವಾಗಲೂ ಕಾದಂಬರಿ ಓದುವುದು, ಹಾಡು ಹಾಡುವುದು, ಚಿತ್ರ ಬರೆಯುವುದನ್ನೆ ಮಾಡುತ್ತಾನೆನ್ನುವ ಸಂದರ್ಭದಲ್ಲಿ ಮಗನ ಭವಿಷ್ಯದ ಬಗ್ಗೆ ಚಿಂತಿಸುವ ಭಾರತೀಯ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಒಬ್ಬ ತಂದೆಯಾಗಿ ಪ್ರತಿಕ್ರಿಯಿಸುವುದು ಉಚಿತವೆನ್ನಿಸುತ್ತದೆ. ಏಕೆಂದರೆ ಶೈಕ್ಷಣಿಕವಾಗಿ ಬಲಿಷ್ಠನಾಗುವ ಸಮಯದಲ್ಲಿ ಈ ರೀತಿ ಬೇರೆ ಕೆಲಸದಲ್ಲಿ ನಿರತನಾಗಿರುವ ಮಗನನ್ನು ಅವನ ಭವಿಷ್ಯದ ಕುರಿತು ಯೋಚಿಸುವ ಬಾದ್ಯತೆ ಗೋವಿಂದರಾಯರಿಗೆ ಇದೆ.

ಮತ್ತೊಂದೆಡೆ ಹಾಡುಗಾರಿಕೆಯಲ್ಲಿ ಮೊದಲ ಬಹುಮಾನ ಬಂದು ತನ್ನ ವ್ಯಾಸಂಗದಲ್ಲೂ ಉತ್ತಮ ಶ್ರೇಣಿಯನ್ನು ಪಡೆದು ವಿದ್ಯಾರ್ಥಿ ವೇತನ ಪಡೆಯುತ್ತಾ ಯಾವುದೇ ಅಡೆತಡೆಯಿಲ್ಲದೆ ತನ್ನ ವಿದ್ಯಾಭ್ಯಾಸದಲ್ಲಿ ಮುಂದುವರೆಯುತ್ತಿದ್ದಾಗ ಈ ಮೊದಲು ಮಗನ ಭವಿಷ್ಯದ ಬಗ್ಗೆ ಚಿಂತಿಸುತ್ತಿದ್ದ ಗೋವಿಂದರಾಯರೇ ತನ್ನ ಮಗನಿಗೆ ಶಹಬ್ಬಾಸ್ ಹೇಳುವುದು ಒಬ್ಬ ಭಾರತೀಯ ತಂದೆಯ ವ್ಯಕ್ತಿತ್ವವನ್ನು ತೋರಿಸುತ್ತದೆ. ಅಂದರೆ ಬಿದ್ದಾಗ ಮೇಲೆತ್ತಿ, ಕುಗ್ಗಿದಾಗ ಆತ್ಮಸ್ಥೈರ್ಯ ನೀಡುವ ಕೆಲಸವನ್ನು ಮಕ್ಕಳಿಗೆ ತಂದೆಯಾದವರು ಮಾಡಿದಾಗಲೇ ಅದು ಹೊಸ ಸಾಧನೆಗೆ ನಾಂದಿಯಾಗುತ್ತದೆ.

ಶಿಕ್ಷಣ ಮುಗಿಸಿ ಮನೆಯ ಜವಾಬ್ದಾರಿ ಹೊತ್ತುಕೊಳ್ಳಬೇಕೆಂಬ ಹಾದಿಯಲ್ಲಿದ್ದ ಮಗ ಗೋಪಾಲಕೃಷ್ಣನು ಕನ್ಯಾಕುಮಾರಿಯಲ್ಲಿ ಈಜಲು ಹೋಗಿ ನೀರುಪಾಲಾಗಿ ಹೋದ. ಮನೆಯನ್ನು ನಂದಾದೀಪವಾಗಿ ಬೆಳಗಬೇಕಿದ್ದ ಮಗನೇ ಸತ್ತು ಹೋದಾಗ ಜೀವವೇ ಹೋದಂತಹ ಅನುಭವ ಗೋವಿಂದರಾಯರದು. ಏಕೆಂದರೆ ತನಗೂ ಹುಷಾರಿಲ್ಲದಿರುವುದು ಮುಂದೆ ಮಗಳು ಕೋಮಲೆಯ ಮದುವೆ ಮಾಡಬೇಕಿರುವುದು ಅಣ್ಣನಾದ ಗೋಪಿಟ್ಟಿಯ ಜವಾಬ್ಧಾರಿಯಾಗಿತ್ತು. ಆದರೀಗ ಅವನು ಹೋದ

ನಂತರ ಕುಟುಂಬದ ಜವಾಬ್ದಾರಿ ಮತ್ತೆ ತನ್ನ ಹೆಗಲ ಮೇಲೆ ಬೀಳುವುದೆಂಬ ಭಯವು ಅವರದು. ಆ ಭಯವು ನ್ಯಾಯಯುತವಾದುದು ಆಗಿದೆ.

ಕೆಲವು ಕಡೆ ಕುಟುಂಬ ನಿರ್ವಹಣೆ ಮಾಡಬೇಕಿದ್ದ ಮಗನೇ ಮರಣಿಸಿರುವುದರಿಂದ ಎಲ್ಲವೂ ಅಲ್ಲೋಲಕಲ್ಲೋಲವಾಗಿದೆ. ಕೆಲವೊಮ್ಮೆ ಮಗನ ಬದಲಾಗಿ ನಾನೇ ಹೋಗಿದ್ದರೆ ಸರಿಹೋಗುತ್ತಿತ್ತು ಎಂದುಕೊಳ್ಳುತ್ತಿದ್ದರು. ಕಾರಣ ಮನೆಯ ಜವಾಬ್ದಾರಿಯಲ್ಲಿ ಯಾವುದೇ ಪಾಲನ್ನು ಹೊಂದಿರದ ತನ್ನನ್ನೇ ದೇವರು ಕರೆದುಕೊಳ್ಳಬಾರದಿತ್ತೇ? ಎಂದು ಗೋವಿಂದರಾಯರು ತಮ್ಮ ಅಳಲನ್ನು ತೋಡಿಕೊಳ್ಳುತ್ತಿದ್ದರು. ಹಾಗೆಯೇ ಹೆಂಡತಿ ಕನಕಮ್ಮ ಮಗನು ಸತ್ತನೆಂಬ ದುಃಖದಲ್ಲಿ ಯಾವಾಗಲೂ ಇದ್ದರೆ ಆಕೆಯನ್ನು ಸಮಾಧಾನಪಡಿಸುವ ಭರದಲ್ಲಿ ನಾನಿನ್ನು ಬದುಕಿದ್ದೀನಿ ....... ದುಃಖಪಡಬೇಡ ಎಂದು ಹೇಳುತ್ತಾರೆ. ಅಂದರೆ ತನ್ನಿಂದ ಈ ಕುಟುಂಬಕ್ಕೆ ಯಾವುದೇ ಪ್ರಯೋಜನವಿಲ್ಲದಿದ್ದರೂ ನೈತಿಕವಾಗಿ ಬೆಂಬಲ ನೀಡುವ ಆ ಮೂಲಕ ಮನಸ್ಥೈರ್ಯವನ್ನು ಹೆಚ್ಚಿಸುವ ಕೆಲಸವನ್ನು ಗೋವಿಂದರಾಯರು ಮಾಡುತ್ತಾರೆ.

ಹಾಗೆಯೇ ಗಂಡು ಮಗುವಿನ ವ್ಯಾಮೋಹಕ್ಕೆ ಒಳಗಾಗಿ, ವಂಶೋದ್ಧಾರಕನು ಬೇಕೇ ಬೇಕೆಂಬ ಹಂಬಲದಿಂದ, ಹಾಗೆಯೇ ತನ್ನ ಕಾಮತೃಷೆಯು ಇಂಗಬೇಕೆಂಬ ಉದ್ದೇಶದಿಂದ ಗೋವಿಂದರಾಯರು ಹೆಂಡತಿ ಕನಕಮ್ಮನವರನ್ನು ಕೂಡಿದ ಫಲವಾಗಿ ಒಂದರ ಹಿಂದೊಂದರಂತೆ ಆನಂದಿ, ಸಾವಿತ್ರಿಯರೆಂಬ ಮತ್ತಿಬ್ಬರು ಹೆಣ್ಣು ಮಕ್ಕಳು ಜನಿಸಿದವು. ಹಾಗಾಗಿ ವಿಧಿಯ ಕ್ರೂರ ಆಟಕ್ಕೆ ಗೋವಿಂದರಾಯರ ಬಳಿ ಉತ್ತರವೇ ಇರಲಿಲ್ಲ. ಇಲ್ಲಿ ಆ ಇಳಿವಯಸ್ಸಿನಲ್ಲೂ ಕಾಮದಾಹಕ್ಕೆ ಹೆಂಡತಿಯನ್ನು ಪೀಡಿಸುವುದು ಕೌಟುಂಬಿಕ ವ್ಯವಸ್ಥೆಗಿಂತ ಕಾಮವೇ ಗೋವಿಂದರಾಯರಿಗೆ ದೊಡ್ಡದಾಯಿತೇ? ಅಂದರೆ ಇಲ್ಲಿ ವಂಶೋದ್ಧಾರಕನ ಹೆಸರಲ್ಲಿ ಲಿಂಗ ತಾರತಮ್ಯ ಮಾಡುತ್ತಿರುವುದು ತಿಳಿಯುತ್ತದೆ. "ಕಾಮತುರಾಣಂ ನಭಯ ನಲಜ್ಜಂ" ಎಂಬ ಮಾತು ಗೋವಿಂದರಾಯರ ಬದುಕಿನಲ್ಲಿ ನಿಜವಾಯಿತು. ಬಡತನದ ಕ್ರೂರ ನಗುವಿಗೆ ಈಗಾಗಲೇ ನಲುಗಿದ್ದ ಸಂಸಾರ ಆ ಎರಡು ಹೆಣ್ಣು ಮಕ್ಕಳೊಂದಿಗೆ ಇನ್ನೂ ದೊಡ್ಡದಾಗಿ ಬೆಳೆಯಿತು.

ಗೋವಿಂದರಾಯರ ಕಾಮತೃಷೆಯ ಫಲವಾಗಿ ಅವರಿಗೆ ಖಾಯಿಲೆಯು ಉಲ್ಬಣವಾಗಿ ಆಸ್ತಮಾವು ಬಂದಿತು. ಒಂದೆಡೆ ಅಗಾಧ ಸಂಸಾರ. ಮದುವೆಗೆ ಬೆಳೆದು ನಿಂತ ಮಗಳು. ಆಸ್ತಮಾ ಹೊರೆ. ಮೊತ್ತೊಂದೆಡೆ ಅತಿಕಾಮ ಬೇಡವೆಂದು ಬುದ್ಧಿವಾದ. ಇವೆಲ್ಲವೂ ಗೋವಿಂದರಾಯರ ಬದುಕಿನ ಬವಣೆ. ಜೊತೆಗೆ ಗೋವಿಂದರಾಯರು ಕೆಲಸ ನಿರ್ವಹಿಸುವಷ್ಟು ಶಕ್ತಿ ಈಗ ಇಲ್ಲ. ಆದ್ದರಿಂದ ಅವರ ಆಫೀಸ್‌ನಿಂದ ರಿಟೈರ್ಡ್ ಕೊಡಿಸಿ ಪೆನ್ಷನ್ ಹಣವನ್ನು ಕೊಟ್ಟು ಪರೋಕ್ಷವಾಗಿ ಈ ಕೆಲಸಕ್ಕೆ ನೀವು ಲಾಯಕ್ಕಿಲ್ಲ ಎಂದು ಹೇಳಿ ಕಪಾಳಕ್ಕೆ ಹೊಟ್ಟಂತಾಗಿತ್ತು ಗೋವಿಂದರಾಯರಿಗೆ ಆ ಮಾತುಗಳು.

ಗೋವಿಂದರಾಯರಿಗೆ ಕೆಲಸವೂ ಹೋಗಿ ಮುಂದೆ ಏನೂ ಮಾಡಬೇಕೆಂಬ ಯೋಚನೆ ತಿಳಿಯದೇ ಇದ್ದಾಗ ಕನಕಮ್ಮನವರು ಎಲ್ಲಾದರೂ ಹೋಗಿ ಕೆಲಸ ಹುಡುಕಿ ಬನ್ನಿ ಎಂದು ಕಳುಹಿಸಿದಾಗ ಅವರು ಊರೆಲ್ಲಾ ಅಲೆದು ಅಲೆದು ಯಾವುದೇ ಕೆಲಸ ಸಿಗದೇ ಪಾರ್ಕ್‌ನಲ್ಲಿ ಬಂದು ಕೂತಾಗ "ಸಾರಂಗಪಾಣಿ ಮೊದಲಿಯಾರ್" ಎಂಬ ಶ್ರೀಮಂತ ಬ್ರಾಹ್ಮಣ ಅಲ್ಲಿಗೆ ಬಂದು ಯಾರೋ ಹೆಣ್ಣು ಮಗಳು ಕೆಲಸಕ್ಕೆ ಹೋಗುತ್ತಿದ್ದಾರೆ ಎಂದು ಹೇಳಿದರು. ಸಂಪ್ರದಾಯವಾಗಿ ಹೆಣ್ಣು ಮಕ್ಕಳು ಮನೆಯ ಹೊರ ಬರುವುದೇ ದೊಡ್ಡ ವಿಷಯವಾಗಿರುವಾಗ ಮಗಳನ್ನು ಕೆಲಸಕ್ಕೆ ಸೇರಿಸುವ ಯೋಚನೆಯಲ್ಲಿ ಗೋವಿಂದರಾಯರಿರುತ್ತಾರೆ. ಅದನ್ನು ಬಂದು ಹೆಂಡತಿ ಬಳಿ ಹೇಳಿದಾಗ ಅವಳು ಕೆಂಡವಾಗುತ್ತಾಳೆ. ಮತ್ತೊಂದೆಡೆ ಮಗಳು ಕೋಮಲೆಯ ಹತ್ತಿರ ಯಾರು ಇಲ್ಲದ ಸಮಯವನ್ನು ನೋಡಿ ತನ್ನ ಮನದ ಇಂಗಿತವನ್ನು, ಕುಟುಂಬದ ಜವಾಬ್ದಾರಿ ಹೊರುವಂತೆ ಕೇಳಿಕೊಳ್ಳುತ್ತಾನೆ. ಇಲ್ಲಿ ಕುಟುಂಬದ ಜವಾಬ್ದಾರಿಯನ್ನು ತನ್ನಿಂದ ಮಗಳ ಹೆಗಲಿಗೆ ಹಾಕುವುದು ಅವರ ಪ್ರಮುಖ ಉದ್ದೇಶವಾಗಿತ್ತು. ಇದೇನು ಉದ್ದೇಶಪೂರ್ವಕವಾಗಿರಲಿಲ್ಲ. ಆ ಕುಟುಂಬದ ಕಿತ್ತು ತಿನ್ನುವ ಬಡತನವೇ ಅದಕ್ಕೆಲ್ಲಾ ಕಾರಣವಾಗಿದೆ.

ಹಾಗೆಯೇ ಮಗಳು ಕೋಮಲೆಯನ್ನು ಕೆಲಸಕ್ಕೆ ಕಳುಹಿಸಲು ಆಕೆಯನ್ನು ಒಪ್ಪಿಸಲು ಮಾಡಿದ ಆರಂಭದ ಪ್ರಯತ್ನಗಳೆಲ್ಲಾ ವಿಫಲವಾದವು. ಆದರೆ ಅವಳನ್ನು ಒಪ್ಪಿಸುವ ಭರದಲ್ಲಿ ಆಕೆಯನ್ನು ಮನಸ್ಸಿನಲ್ಲೆ ಬೈದುಕೊಳ್ಳುತ್ತಾ, ಹೇಗಾದರೂ ಮಾಡಿ ಅವಳನ್ನು ಒಪ್ಪಿಸಬೇಕೆಂದು ಪಣವನ್ನು ತೊಟ್ಟು, ಬಡತನದ ಬೇಗೆಯಲ್ಲಿ ನರಳುತ್ತಿರುವ ತನ್ನ ಕುಟುಂಬದ ಹೊಣೆಯನ್ನು ಅವಳಿಗೆ ನೀಡಬೇಕು. ಅದು ಅನಿವಾರ್ಯ ಕೂಡಾ. ವಯಸ್ಸಿಗೆ ಬಂದ ಮಗಳನ್ನು ಮದುವೆ ಮಾಡುವ ಉದ್ದೇಶವಿದ್ದರೂ ತನ್ನ ಅಸಹಾಯಕ ಪರಿಸ್ಥಿತಿಯಲ್ಲಿ ಬೇರೆ ವಿಧಿಯಿಲ್ಲದೇ ಹೀಗೆ ಮಾಡುತ್ತಿದ್ದಾರೆ.

ಮುಂದೆ ಕಂಪ್ಯೂಟರ್ ತರಬೇತಿ ಕೇಂದ್ರಕ್ಕೆ ಸೇರಿಸಲು ತನ್ನ ಮಗಳನ್ನು ಪರಿಪರಿಯಾಗಿ ಬೇಡಿಕೊಂಡರೂ ಅವಳು ಮೀನಾಮೇಷ ಎಣಿಸುತ್ತಾ ಇರುವಾಗ "ಈ ಲೌಡಿಗೆಷ್ಟು ಸೊಕ್ಕು" ಎಂದು ತನ್ನ ಮಗಳನ್ನೇ ಬೈಯ್ಯುವ ವಾತಾವರಣದಲ್ಲಿ ಇರುವ ಗೋವಿಂದರಾಯರಿಗೆ ತನ್ನ ಕಿತ್ತು ತಿನ್ನುವ ಬಡತನ ಅವನ ಬಾಯಲ್ಲಿ ಅಂಥ ಮಾತನಾಡಿಸುತ್ತಿದೆ. ಕಂಪ್ಯೂಟರ್ ತರಬೇತಿ ಕೇಂದ್ರಕ್ಕೆ ಹೋಗಲು ಒಪ್ಪಿದ ತನ್ನ ಮಗಳನ್ನು ಕಂಡು ಸಂತಸದಿಂದ, ತನ್ನ ಹೆಂಡತಿಯು ಈ ಹಿಂದೆ ಹೇಳಿದ ಮಾತು ನೆನಪಾಗಿ ಮಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುವ ಕಾಯಕವನ್ನು ಗೋವಿಂದರಾಯರು ಮಾಡುತ್ತಾರೆ.

ಒಟ್ಟಾರೆ 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಬರುವ ಗೋವಿಂದರಾಯರ ಪಾತ್ರ ಮಧ್ಯಮ ವರ್ಗದ ಕುಟುಂಬದಲ್ಲಿನ ಒಬ್ಬ ಅಸಹಾಯಕ ಗಂಡನಾಗಿ, ತಂದೆಯಾಗಿ ಕಾಣಿಸಕೊಳ್ಳುತ್ತದೆ. ಕಿತ್ತು ತಿನ್ನುವ ಬಡತನವಿರುವಾಗ ಆ ಸಂಸಾರವನ್ನು ನಿಭಾಯಿಸಲು ತನ್ನಿಂದ ಕಷ್ಟವಾಗುವುದೆಂದು ತಿಳಿದಾಗ ಬದುಕೇ ಇವರೆದುರು ಕೇಕೆ ಹಾಕಿ ನಗುತ್ತಿರುವಾಗ ತನ್ನ ಮಗ ಸತ್ತ ಸಮಯದಲ್ಲಿ ಅವನ ಬದಲಾಗಿ ನಾನೇ

ಾಯಬಾರದಿತ್ತೇ ಎಂದು ತನ್ನ ಹೀನಾಯ ಸ್ಥಿತಿಯನ್ನು ನೆನೆದು, ಮತ್ತೊಂದೆಡೆ ಮಗನ ಸಾವಿನ ಸುದ್ದಿ ರಸಿಡಿಲಾಗಿ ಎರಗಿರುವಾಗ, ಸಂಸಾರ ಶೋಕಸಾಗರದಲ್ಲಿ ಮುಳುಗಿರುವಾಗ ತನ್ನಿಂದ ಏನೂ ಾಧ್ಯವಿಲ್ಲವೆಂದು ತಿಳಿದಿದ್ದರೂ ನಾನಿದ್ದೇನೆ ಈ ಸಂಸಾರಕ್ಕೆ ಎಂಬ ಧೈರ್ಯ ತುಂಬಿದ ಮಾತುಗಳು ೋವಿಂದರಾಯ ಪಾತ್ರದ ಗಟ್ಟಿತನವನ್ನು ತಿಳಿಸುತ್ತದೆ.

### .2.3. ರಾಮಾವಧಾನಿ (ಹೆಣ್ಣು ಕಟ್ಟಿದ ಮನೆ)

ತ.ರಾ.ಸು.ರವರ 'ಹೆಣ್ಣು ಕಟ್ಟಿದ ಮನೆ' ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳು ಎಷ್ಟು ಮುಖ್ಯವೋ ುರುಷ ಪಾತ್ರಗಳಲ್ಲಿ ರಾಮಾವಧಾನಿ ಪಾತ್ರವು ತುಂಬಾ ಮುಖ್ಯವಾದುದು. ಇವರದು 'ರಾಜಾನುಕುಂಟೆ ಅವಧಾನಿಗಳ ಮನೆತನ' ಮಾಗಡಿ ಪಾಳೆಯಗಾರ ಕೆಂಪೇಗೌಡನ ಆಸ್ಥಾನ ಪುರೋಹಿತರಾಗಿದ್ದರು. ಾಮಾವಧಾನಿಗಳ ತಂದೆಯ ಹೆಸರು ವೆಂಕಟರಾಮಾವಧಾನಿಗಳು. ಇವರ ನಾಲ್ವರು ಮಕ್ಕಳಲ್ಲಿ ಾಮಾವಧಾನಿಯನ್ನು ಹೊರತುಪಡಿಸಿದರೆ ಉಳಿದವರೆಲ್ಲಾ ಆಸ್ತಿಯ ಮೇಲ್ವಿಚಾರಣೆ, ಉಸ್ತುವಾರಿ, ವ್ಯವಹಾರ ಾಣ್ಮೆ ತುಂಬಾ ಚೆನ್ನಾಗಿ ತಿಳಿದಿದ್ದರೆ ರಾಮಾವಧಾನಿಯು ಮಾತ್ರ ವ್ಯವಹಾರ ಜ್ಞಾನದಲ್ಲಿ ಶೂನ್ಯ. ತನಗೆ ಬರೀ ೇದ ಅಧ್ಯಯನ, ಉಪನಿಷತ್ತು, ರಾಮಾಯಣ, ಮಹಾಭಾರತ ಇತ್ಯಾದಿ ಧಾರ್ಮಿಕ ವಿಷಯಗಳಲ್ಲೆ ಆತನಿಗೆ ಆಸಕ್ತಿಯೇ ಹೊರತು ಹಣ, ಆಸ್ತಿ ಇತ್ಯಾದಿ ವಿಷಯಗಳಲ್ಲಿ ರಾಮಾವಧಾನಿ ಅಷ್ಟೊಂದು ಪಳಗಿದವನಲ್ಲ.

ರಾಮಾವಧಾನಿಯ ಅದೃಷ್ಟವೆಂಬಂತೆ ಕೊರಟಗೆರೆಯ ನಾರಾಯಣ ದೀಕ್ಷಿತರ ಪುತ್ರಿಯಾದ ೆರಸಮ್ಮನನ್ನು ರಾಮಾವಧಾನಿ ಕೈಹಿಡಿದ ನಂತರ ಮನೆಗೆಲಸದ ಜೊತೆ ವ್ಯವಹಾರ ಜಾಣೆಯಾಗಿದ್ದಳು. ತನ್ನ ಾಯಿ ಕಲಿಸಿದ ವಿದ್ಯೆಯನ್ನು ಚಾಚೂ ತಪ್ಪದೇ ಗಂಡನ ಮನೆಯಲ್ಲೂ ಅದನ್ನು ನಿರ್ವಹಿಸಲು ಣೆಯಾದಳು. ಮುಂದೆ ಮಾವನವರಾದ ವೆಂಕಟ ರಾಮಾವಧಾನಿಗಳು ತೀರಿಕೊಂಡ ಮೇಲೆ ಾಮಾವಧಾನಿ ತಮ್ಮ ಪಾಲಿನ ಆಸ್ತಿ ತೆಗೆದುಕೊಂಡು ತಮ್ಮ ಕಾಲ ಮೇಲೆ ನಿಂತು ತಮ್ಮ ಸಂಸಾರವನ್ನು ಡೆಸಬೇಕಾಗಿ ಬಂದಿತು.

ರಾಮಾವಧಾನಿಯು ತನ್ನ ತಂದೆಯು ಹೇಳಿದ ಹಾಗೆ 'ದೇವರ ಮಗ'. ಚಿಕ್ಕಂದಿನಿಂದಲೂ ಈತನಿಗೆ ್ಯಾವಹಾರಿಕ ವಿಷಯಗಳಲ್ಲಿ ಆಸಕ್ತಿ ಕಡಿಮೆ. ಉಳಿದ ಅಣ್ಣ ತಮ್ಮಂದಿರಂತೆ ಮನೆಯ ಯಾವ ್ಯವಹಾರದಲ್ಲೂ ತಲೆಹಾಕುತ್ತಿರಲಿಲ್ಲ. ಯಾವ ಯೋಚನೆಯೂ ಇಲ್ಲದೇ ಮನೆಯಲ್ಲೋ ಹೊರಗೋ ಆತನ ್ತ್ಯದ ಊಟ ಕಳೆದು ಹೋಗುತ್ತಿತ್ತು. ಹಾಗೇ ದಾನ ಬರುತ್ತಿದ್ದ ಪಂಚೆ, ವಸ್ತ್ರಗಳಿಂದಾಗಿ ಬಟ್ಟೆಯ ಚಿಂತೆಯೂ ರಲಿಲ್ಲ. ದಕ್ಷಿಣೆ ಬಂದ ಬಿಡಿಗಾಸನ್ನು ತನ್ನ ಹತ್ತಿರ ಇಟ್ಟುಕೊಳ್ಳದೇ ತನ್ನ ತಂದೆಯ ಕೈಯಲ್ಲಿ ಹಾಕಿಬಿಡುತ್ತಿದ್ದ. ನ್ನ ದುಡಿಮೆಯ ಆ ಹಣವನ್ನು ಯಾರು ಖರ್ಚು ಮಾಡುತ್ತಾರೆ. ಯಾರ ಸುಖಕ್ಕೆ ಅದು

ವಿನಿಯೋಗವಾಗುತ್ತದೆ ಎಂಬ ಯೋಚನೆಯನ್ನು ಮಾಡದೇ, ನಿಷ್ಕಲ್ಮಶ ಮನಸ್ಸಿನಿಂದ ಎಲ್ಲರನ್ನೂ ನಂಬುವವನಾಗಿದ್ದಾನೆ.

ಈ ಬಗ್ಗೆ ವೆಂಕಟರಾಮಾವಧಾನಿಗಳು ಹಲವು ಬಾರಿ ರಾಮಾವಧಾನಿಗೆ ಹೇಳಿದ್ದರೂ ಅದರ ಬಗ್ಗೆಯೇ ಯಾವುದೇ ಪರಿವೆ ಇಲ್ಲದೇ ಇದ್ದ. ಒಮ್ಮೆ ತಾನು ದುಡಿದ ಹಣವನ್ನು ತಂದೆಯ ಹತ್ತಿರ ಕೊಡಲು ಬಂದಾಗ ಎಲ್ಲಾ ಹಣವನ್ನು ನನ್ನ ಕೈಗೆ ಕೊಡುತ್ತಿದ್ದಿಯಲ್ಲಾ ಎಂದಾಗ ನನ್ನ ಹತ್ತಿರ ಇಟ್ಟುಕೊಂಡು ನಾನೇನು ಮಾಡಲಿ ಎಂದನು. ಆಗ ತಂದೆ ನಿನ್ನಲ್ಲಿ ಹಣಕ್ಕೆ ಬೆಲೆ ಇಲ್ಲವೇ? ಎಂದಾಗ ಹಣಕ್ಕೆ ಬೆಲೆ ಇದೆ ಆದರೆ ನನಗೆ ಇದರ ಅವಶ್ಯಕತೆ ಈಗ ಇಲ್ಲ ಎನಿಸುತ್ತಿದೆ ಎಂದು ರಾಮಾವಧಾನಿಯು ತನ್ನ ಮುಗ್ಧತೆಯ ಜೊತೆಗೆ ತನ್ನ ಜೀವನದಲ್ಲಿ ಹಣದ ಬೆಲೆಯು ಅಷ್ಟೊಂದು ಇಲ್ಲ ಎಂದು ತನ್ನ ಬದುಕಿನ ಪ್ರಮುಖ ಉದ್ದೇಶವೇ ವೇದ ಪಾರಾಯಣ, ಉಪನಿಷತ್ತು, ರಾಮಾಯಣ, ಮಹಾಭಾರತಗಳನ್ನು ಓದುವುದೇ ಆಗಿತ್ತು ಎಂಬುದಾಗಿದೆ.



ರಾಮಾವಧಾನಿಯು ತನ್ನ ವೇದಾಂಗ ಪಾರಾಯಣದ "ದಶೋಪನಿಷತ್ತು" ಗಳ ಗ್ರಂಥದಲ್ಲಿ ಬರುವ 'ಬೃಹದಾರಣ್ಯಕೋಪನಿಷತ್ತಿ' ನಲ್ಲಿ ಬರುವ ಹಲವು ಉತ್ತಮ ಮಾತುಗಳನ್ನು ತನ್ನ ಪಾರಾಯಣದ ಚಮತ್ಕಾರವನ್ನು ತೋರಿಸಿ ತಂದೆಯ ಬಳಿ ಭೇಷ್ ಎನಿಸಿಕೊಂಡಿದ್ದ. ಆಗ ತಂದೆ ವೆಂಕಟರಾಮಾವಧಾನಿಗಳು ಕೃತಯುಗದಲ್ಲಿ ಧರ್ಮ, ನ್ಯಾಯ, ಸತ್ಯಗಳಿಗೆ ಜಾಗವಿತ್ತೆ, ವಿನಃ ಕಲಿಯುಗದಲ್ಲಿ ಇವಕ್ಕೆಲ್ಲಾ ಜಾಗವಿಲ್ಲ ಎಂದಾಗ ರಾಮಾವಧಾನಿ ಹೇಳುವ ಉತ್ತರ ಒಬ್ಬ ಸುಸಂಸ್ಕೃತ ವ್ಯಕ್ತಿ ಹೇಳುವ ಮಾತಾಗಿದೆ. ಚಿರಂತನವಾದ ಸತ್ಯ, ಧರ್ಮಕ್ಕೆಲ್ಲಿಯದು ಕಾಲ ವ್ಯತ್ಯಾಸದ ಪರಿಣಾಮ? ಬ್ರಾಹ್ಮಣನಾಗಿ ಹುಟ್ಟಿರೋದು ಎಷ್ಟು ಸತ್ಯವೋ ಉಪನಿಷತ್ತು ಅಷ್ಟೇ ಸತ್ಯ. ಆದ್ದರಿಂದ ಸತ್ಯ, ನ್ಯಾಯ, ನೀತಿ, ಧರ್ಮಕ್ಕೆ ಎಂದೂ ಸಾವಿಲ್ಲ ಎಂದು ತನ್ನ ಕಥೆಯ ಮೂಲಕ ನಿರೂಪಿಸುತ್ತಾನೆ.

ಮುಂದೆ ವೆಂಕಟರಾಮಾವಧಾನಿಗಳು ತನ್ನ ಸೊಸೆ ನರಸಮ್ಮಳನ್ನು ಕರೆದು ತನ್ನ ಮಗನಿಗೆ ವ್ಯವಹಾರ ಜ್ಞಾನ ಕಡಿಮೆ ಎಂದು ಹೇಳಿದಾಗ ತನ್ನ ಮಾವನ ಮಾತಿಗೆ ಬೆಲೆ ನೀಡಿ ತನ್ನ ಗಂಡನಿಗೆ ವ್ಯವಹಾರ ಜ್ಞಾನ ಇಲ್ಲವೆಂದು ತಿಳಿದ ಮೇಲೆ ಆತನ ಮೇಲೆ ತನ್ನ ಅಧಿಕಾರವನ್ನು ಚಲಾಯಿಸದೇ ತನ್ನ ಕುಟುಂಬ ನಿರ್ವಹಿಸುವ ಜಾಣ್ಮೆಯನ್ನು ತೋರಿಸುತ್ತಾಳೆ.

ವೆಂಕಟರಾಮಾವಧಾನಿಗಳು ತನ್ನ ಮಗನ ಬಗ್ಗೆಯೇ ಹೇಳುತ್ತಾ "ನನ್ನ ಮಗ ದೇವರಂಥಾ ಮನುಷ್ಯ, ನನ್ನ ವಂಶಾನ ಪುನೀತ ಮಾಡುವುದಕ್ಕೆ ದೇವರು ನನಗೆ ಅಂಥ ಸತ್ಪುತ್ರನನ್ನು ಕರುಣಿಸಿದ್ದಾನೆ. ಈ ವಿಷಯದಲ್ಲಿ ನನಗೆ ಅಪನಂಬಿಕೆಯೇ ಇಲ್ಲ. ನನ್ನ ಮಗ ಎಷ್ಟು ಒಳ್ಳೆಯವನೋ ತನ್ನ ಸೊಸೆಗೆ ತಕ್ಕ ಗಂಡನಾಗುತ್ತಾನೆ" ಎಂಬ ಪೂರ್ಣ ವಿಶ್ವಾಸವನ್ನು ತನ್ನ ಮಗನ ಮೇಲೆ ಇಟ್ಟಿರುವುದಾಗಿ ಹೇಳುತ್ತಾರೆ.

ಹಾಗೆಯೇ ರಾಮಾವಧಾನಿಯು ತನ್ನ ಹೆಂಡತಿಯನ್ನು ಯಾವುದೇ ರೀತಿಯಲ್ಲಿ ಅನುಮಾನಿಸದೇ ಮನೆಯ ಜವಾಬ್ಧಾರಿ ಹೊತ್ತ ಹೆಂಡತಿಗೆ ಪೂರ್ಣ ಸಹಕಾರವನ್ನು ನೀಡುತ್ತಾನೆ. ತಾನು ನಿತ್ಯವೂ ದುಡಿದ ಎಲ್ಲಾ ಹಣವನ್ನು ತನ್ನ ಹೆಂಡತಿಯ ಮಡಿಲಿಗೆ ಹಾಕಿ ತಾನು ಗಂಡಸು ಮನೆಯ ಎಲ್ಲಾ ಹೊಣೆಯು ನನ್ನದೇ ಎಂದು ಯಾವುದೇ ದರ್ಪ ತೋರಿಸದೇ ಹೆಣ್ಣಿಗೆ ಪೂರ್ಣ ಸ್ವಾತಂತ್ರ್ಯ ನೀಡುವ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೂ ಎಲ್ಲಾ ರೀತಿಯ ಹಕ್ಕು ಅಧಿಕಾರವಿದೆ. ಎಲ್ಲಾ ರೀತಿಯಲ್ಲೂ ರಾಮಾವಧಾನಿ ತನ್ನ ಹೆಂಡತಿ ನರಸಮ್ಮನಿಗೆ ಸಹಕಾರ ನೀಡುತ್ತಾನೆ.

ರಾಮಾವಧಾನಿ ಹಸುಗೂಸು ಮನಸಿನಂಥವನು. ಅವನ ಗುಣಗಳಿಗೆ ಯಾರೂ ಸಾಟಿಯಾಗಲಾರರು. 'ಹುಟ್ಟುತ್ತಾ ಅಣ್ಣ ತಮ್ಮಂದಿರು, ಬೆಳೆಯುತ್ತಾ ದಾಯಾದಿಗಳು' ಎಂಬಂತೆ ತನ್ನ ಪಾಲಿಗೆ ಬಂದಿದ್ದನ್ನು ಪಂಚಾಮೃತವೆಂದು ಭಾವಿಸಿ ತನ್ನ ಪಾಲಿನ ಆಸ್ತಿ ಕಡಿಮೆ ಬಂದರೂ, ಅಣ್ಣ ತಮ್ಮಂದಿರ ಬಳಿಯಲ್ಲಿ ಯಾವುದೇ ಜಗಳವಾಡಲಿಲ್ಲ. ಇಡೀ ಮನೆಯ ಜವಾಬ್ಧಾರಿ ಹೊತ್ತ ನರಸಮ್ಮನಿಗೆ ತನ್ನೆಲ್ಲಾ ಸಹಕಾರವನ್ನು ನೀಡುತ್ತಾ, ಹೊಸ ಮನೆಯನ್ನು ಕಟ್ಟಿಸುವಾಗ, ಮಗ ಶ್ರೀನಿವಾಸವಧಾನಿಗೆ ಮದುವೆ ಮಾಡುವ ಸಮಯ ಎಂದು ಸೊಸೆಯನ್ನು ಗೊತ್ತು ಮಾಡುವ ವಿಷಯದಲ್ಲೂ ತನ್ನ ನಿರ್ಧಾರವೇ ಅಂತಿಮವಾಗಿರಬೇಕೆಂದು ಯಾವುದೇ ದರ್ಪ ತೋರಿಸಲಿಲ್ಲ. ಒಟ್ಟಾರೆ ರಾಮಾವಧಾನಿ ಪಾತ್ರದ ಮೂಲಕ ಸದ್ಗುಣ ಸಂಪನ್ನತೆಯುಳ್ಳವನ ಪರಿಚಯವಾಗಿದೆ.

### 4.2.4. ಶೇಷಾಚಲ (ಹೆಣ್ಣು ಕಟ್ಟಿದ ಮನೆ)

'ಹೆಣ್ಣು ಕಟ್ಟಿದ ಮನೆ' ಕಾದಂಬರಿಯಲ್ಲಿನ ಮತ್ತೊಂದು ಪಾತ್ರವಾಗಿ ಶೇಷಾಚಲನು ಕಾಣಿಸಿಕೊಳ್ಳುತ್ತಾನೆ. ರಾಮಾವಧಾನಿಗಳ ಅಪರಾವತಾರವೇ ಈ ಶೇಷಾಚಲ. ರಾಮಾವಧಾನಿಗಳ ಎರಡನೇ ಮಗನೇ ಶೇಷಾಚಲ. ತನ್ನ ತಂದೆಯಂತೆ ಸತ್ಯ, ನ್ಯಾಯ, ನೀತಿ, ನಿಷ್ಠೆ, ಪ್ರೀತಿ ಮುಂತಾದ ಅತ್ಯುನ್ನತ ಗುಣಗಳಿರುವ ವ್ಯಕ್ತಿತ್ವವನ್ನು ಉಳ್ಳಂತಹ ವ್ಯಕ್ತಿಯೇ ಶೇಷಾಚಲ. ತನ್ನ ಅಣ್ಣ ಶ್ರೀನಿವಾಸಾವಧಾನಿಯನ್ನು ಪೂರ್ಣವಾಗಿ ನಂಬುವ, ನಿಷ್ಕಲ್ಮಶ ಮನಸ್ಸಿನ, ಮಕ್ಕಳ ಗುಣದ ವ್ಯಕ್ತಿಯೇ ಶೇಷಾಚಲ.

ಶ್ರೀನಿವಾಸಾವಧಾನಿಯು ತಾಯಿಗೆ ತಕ್ಕ ಮಗನಾದ ಹಾಗೆ, ಶೇಷಾಚಲನು ತಂದೆಗೆ ತಕ್ಕ ಶಿಷ್ಯನಾದ. ಪೌರೋಹಿತ್ಯಕ್ಕೆ ಬೇಕಾದ ತಂತ್ರ-ಮಂತ್ರಗಳ ಪಾಠವನ್ನು ಶೇಷಾಚಲನಿಗೆ ಮಾಡಿಸಿದ ಬಳಿಕ ಪರಿಚಿತರ ಮನೆಗಳಲ್ಲಿ ಪ್ರವೇಶವನ್ನು ಮಾಡಿಸಿದ. ಜೊತೆಗೆ ಪೂಜಾಧಿಕಾರವು ದೊರೆತು, ತಿಂಗಳಿಗೆ ಐದು ರೂಪಾಯಿ ಮಾಸಾಶನ, ಮೂರು ಎಕರೆ ಗದ್ದೆಯ ಉತ್ಪನ್ನ ದೊರೆಯಿತು. ಈ ಮೂಲಕ ತನ್ನ ಜೀವನೋಪಾಯಕ್ಕೆ ಯಾವುದೇ ಸಮಸ್ಯೆಯಿಲ್ಲದೆ ಮುಂದುವರೆಯಿತು.

ಹಾಗೆಯೇ ಅಣ್ಣ ಶ್ರೀನಿವಾಸಾವಧಾನಿಯು ಹೆಂಡತಿಯ ಮಾತನ್ನು ಕೇಳಿ ಅನಂತಶೆಟ್ಟರ ಬಳಿ ಸಾಲ ಪಡೆಯಲು ಹೆಂಡತಿ ಹೇಳಿಕೊಟ್ಟ ಹಾಗೆಯೇ ಹೇಳುತ್ತಾ ಮದುವೆ ಆಗದ ತನ್ನ ಮೇಲೆ ಸಾಲದ ಹೊರೆಯನ್ನು ಹೊರಿಸುತ್ತಿದ್ದಾರೆಂದು ಮೋಸವನ್ನು ಮಾಡುತ್ತಿದ್ದಾರೆಂದು ಕಿಂಚಿತ್ತೂ ಊಹೆಯನ್ನು ಕೂಡ ಮಾಡದೇ ತನ್ನ ಅಣ್ಣ ಹೇಳಿದ ಮಾತು ಎಲ್ಲವನ್ನು ನಂಬಿ ಅಣ್ಣ ಹೇಳಿದಂತೆ ತಾನು ನಡೆದುಕೊಳ್ಳುವುದಾಗಿ ಹೇಳಿದನು. ಅದಲ್ಲದೆ ತಂದೆಯ ಮಾತಿನಂತೆ ಅಣ್ಣ-ಅತ್ತಿಗೆ ಇಬ್ಬರಿಗೂ ತಂದೆ-ತಾಯಿಯ ಸ್ಥಾನವನ್ನು ನೀಡಿ ತನ್ನ ಮನಸ್ಸಲ್ಲಿ ವಿಶೇಷ ಸ್ಥಾನವನ್ನು ಕೊಟ್ಟಿದ್ದನು.

ತಂಗಿ ಪದ್ಮಾವತಿಯ ನಿಷೇಕವನ್ನು ನೆರವೇರಿಸಲು ಅಣ್ಣ ಶ್ರೀನಿವಾಸವಧಾನಿಯು ಹೇಳಿದಂತೆ ನಡೆದುಕೊಳ್ಳುತ್ತಾ, ಹೇಳಿದ ಎಲ್ಲಕ್ಕೂ ತಲೆಯಾಡಿಸಿಕೊಳ್ಳುತ್ತಾ ಅಣ್ಣನನ್ನು ಪೂರ್ಣವಾಗಿ ನಂಬುತ್ತಾನೆ. ಆದರೆ ಅಣ್ಣ ಶ್ರೀನಿವಾಸವಧಾನಿಯು ತನ್ನ ಹಳೆಯ ಸಾಲವನ್ನು ಇದರ ಜೊತೆಗೆ ಸೇರಿಸಿ ಐನೂರು ರೂಪಾಯಿ ಹಣವನ್ನು ಸಾಲವಾಗಿ ಸೇರಿಸಿ ಅನಂತಶೆಟ್ಟರ ಬಳಿ ಸಾಲ ತೆಗೆದುಕೊಂಡು ಶೇಷಾಚಲನು ತನ್ನ ತಂಗಿಯ ಮದುವೆ ವಿಷಯದಲ್ಲಿ, ಆಕೆಯ ಜವಾಬ್ಧಾರಿಯಲ್ಲಿ ತನಗೂ ಪಾಲಿದೆ ಎಂಬುದನ್ನು ತೋರಿಸಿಕೊಡುತ್ತಾನೆ.

ಶೇಷಾಚಲನು ತನ್ನ ಅಣ್ಣನು ತೋಡಿದ ಖೆಡ್ಡಾಕ್ಕೆ ಬೀಳುತ್ತಾನೆ. ಅಂದರೆ ಈ ಮೊದಲು ಅನಂತಶೆಟ್ಟರ ಬಳಿ ತಾನೇ ನೇರವಾಗಿ ಹಣವನ್ನು ಸಾಲವಾಗಿ ತೆಗೆದುಕೊಳ್ಳುತ್ತಿದ್ದ ಅಣ್ಣ ಶ್ರೀನಿವಾಸಾವಧಾನಿಯು ಈಗ ಸಾಲ ಪಡೆಯಲು ತನ್ನನ್ನೇ ನೇರವಾಗಿ ಕಳುಹಿಸುತ್ತಿದ್ದಾನೆ. ಅದಲ್ಲದೆ ಪತ್ರದ ಮೇಲೆಯೇ ರುಜುವನ್ನು ಹಾಕಿಸಿಕೊಳ್ಳುತ್ತಿದ್ದಾನೆ. ಇದನ್ನೆಲ್ಲಾ ಕಪಟ ಬುದ್ಧಿಯಲ್ಲಿ ತನ್ನ ಅಣ್ಣನು ಮಾಡುತ್ತಿದ್ದು ತನಗೆ ದ್ರೋಹ ಬಗೆಯುತ್ತಿದ್ದಾನೆಂದು ತನ್ನ ಮನಸ್ಸಿಗೆ ಹೊಳೆಯುವುದೇ ಇಲ್ಲ ಈ ಮುಗ್ಧ ಮನಸ್ಸಿನ ಶೇಷಾಚಲನಿಗೆ.

ಆರಂಭದಲ್ಲಿ ಶೇಷಾಚಲನಿಗೆ ತನ್ನ ಸ್ವಹಸ್ತದಿಂದ ರುಜುಹಾಕಿ ಸಾಲವನ್ನು ಪಡೆದು ತಂಗಿಯ ನಿಷೇಕವನ್ನು ಮುಗಿಸಿ ಅವಳನ್ನು ಸುಖ-ಸಂತೋಷವಾಗಿ ಎಲ್ಲರೂ ಆಕೆಯ ಗಂಡನ ಮನೆಗೆ ಕಳುಹಿಸಿದ ಮೇಲೆ ತಮ್ಮ ಮನೆಯಲ್ಲಿ ನಡೆಯುತ್ತಿದ್ದ ಕೆಲವು ಬದಲಾವಣೆಗಳನ್ನು ಅದರಲ್ಲೂ ವಿಶೇಷವಾಗಿ ತನ್ನ ಅತ್ತಿಗೆ ವೆಂಕಮ್ಮ ಮಾಡುತ್ತಿರುವ ಮಸಲತ್ತನ್ನು ಶೇಷಾಚಲನು ಅರಿಯದಾದ. ಇಲ್ಲಿ ಮುಖ್ಯವಾಗಿ ಅತ್ತಿಗೆ ವೆಂಕಮ್ಮಳು ತನ್ನ ಮೈದುನನ ಮೇಲೆ ಅಕ್ಕರೆ, ಅಭಿಮಾನವನ್ನು ತೋರಿಸಬೇಕಿತ್ತು. ಆದರೆ ತನ್ನ ಅತ್ತೆ ನರಸಮ್ಮ ಸತ್ತ ಮೇಲೆ ಇಡೀ ಮನೆಯ ಎಲ್ಲಾ ಅಧಿಕಾರಕ್ಕಾಗಿ ಹೊಂಚು ಹಾಕುತ್ತಿದ್ದ ಅತ್ತಿಗೆ ವೆಂಕಮ್ಮಳ ಮೋಸದ ಜಾಲಕ್ಕೆ ಶೇಷಾಚಲನು ಬಲಿಯಾಗಬೇಕಾಯಿತು.

ಮನೆಯ ಎಲ್ಲಾ ಅಧಿಕಾರವನ್ನು ಹೊತ್ತ ವೆಂಕಮ್ಮಳು ಮೈದುನ ಶೇಷಾಚಲನನ್ನು ಕಾಲಕಸವಾಗಿ ಕಾಣಲು ಆರಂಭಿಸಿದಳು. ಆರಂಭದಲ್ಲಿ ಇದನ್ನು ಶೇಷಾಚಲನು ಗಮನಿಸಲಿಲ್ಲ. ಆದರೆ ದಿನಗಳೆದಂತೆ ಅತ್ತಿಗೆಯ ಹಾವ-ಭಾವದಲ್ಲಿ ಆಗುತ್ತಿದ್ದ ಬದಲಾವಣೆಯನ್ನು ಕಂಡು ಹಿಡಿಯಲು ಬಹುದಿನ ಬೇಕಾಗಿರಲಿಲ್ಲ.

ಊಟ ನೀಡುವುದರಿಂದ ಹಿಡಿದು ಶೇಷಾಚಲನಿಗೆ ಮಾಡಿಕೊಡಬೇಕಾದ ಎಲ್ಲಾ ಕೆಲಸಗಳ ಬಗ್ಗೆಯೂ ಅಸಡ್ಡೆಯನ್ನು ತೋರಿಸತೊಡಗಿದಳು. ಇದನ್ನು ಮೊದಮೊದಲು ಶೇಷಾಚಲನು ಅಷ್ಟೊಂದು ಕಂಡುಕೊಳ್ಳಲಿಲ್ಲ. ಏಕೆಂದರೆ ಶೇಷಾಚಲನು ಎಲ್ಲರನ್ನು ಎಲ್ಲವನ್ನು ಧರ್ಮದ ಹಿನ್ನೆಲೆಯಲ್ಲಿ ನೋಡುತ್ತಿದ್ದವನಿಗೆ ಮೋಸ, ವಂಚನೆ, ಕಪಟತೆಯ ಕರಾಳ ಸತ್ಯವನ್ನು ತಿಳಿಯಲು ಸ್ವಲ್ಪ ತಡವಾಯಿತು.

ಅಣ್ಣ ಶ್ರೀನಿವಾಸಾವಧಾನಿ ಅಸಹಾಯಕನಾಗಿದ್ದು, ತಂದೆ ರಾಮಾವಧಾನಿಗಳಿಗೆ ಅವರ ಇಳಿ ವಯಸ್ಸಿನಲ್ಲಿ ಈ ವಿಷಯಗಳನ್ನೆಲ್ಲಾ ಹೇಳಿ ಅವರ ಮನಸ್ಸಿಗೂ ನೋವುಂಟು ಮಾಡುವುದು ಶೇಷಾಚಲನಿಗೆ ಇಷ್ಟವಿರಲಿಲ್ಲ. ಈ ಬಗ್ಗೆ ಅಣ್ಣ ಶ್ರೀನಿವಾಸವಧಾನಿಗೆ ಹೇಳಿದರೂ ಅದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಇನ್ನೆರಡು ದಿನವಿರು, ಮದುವೆಯಾಗುವವರೆಗೂ ಸ್ವಲ್ಪ ಸಹಿಸಿಕೊಂಡಿರು ಎಂದು ಅಣ್ಣ ಸಬೂಬು ಹೇಳುತ್ತಾ ದಿನಗಳನ್ನು ಮುಂದೂಡುತ್ತಿದ್ದಾನೆ.

ಹಾಗೆಯೇ ಅತ್ತಿಗೆಯ ಜೊತೆಗೆ ಅವರ ತಂಗಿ ಭಾಗೀರಥಿಯು ತನ್ನ ಅಕ್ಕನ ಮೇಲೆ ಇರುವ ಪ್ರೀತಿಗೆ ಅವಳ ಮಸಲತ್ತನ್ನು ಅರಿಯದೇ ಶೇಷಾಚಲನನ್ನು ಕಾಲ ಕಸದಂತೆ ಕಂಡಳು. ಆದರೆ ಮುಂದೆ ಸಾಗುತ್ತಾ ಅಕ್ಕನ ಮೋಸದ ಜಾಲವನ್ನು ಅರಿತ ಭಾಗೀರಥಿ ಶೇಷಾಚಲನ ಬಗ್ಗೆ ಅನುಕಂಪ, ಕರುಣೆಯನ್ನು ತೋರಿಸಲಾರಂಭಿಸಿದಳು. ಮುಂದೆ ಭಾಗೀರಥಿಯೇ ಶೇಷಾಚಲನನ್ನು ಮದುವೆಯಾಗಬೇಕಾದ ಪ್ರಸಂಗ ಬಂದಾಗ ತನ್ನ ಅಕ್ಕ-ಭಾವನು ಮಾಡುತ್ತಿರುವ ಯೋಜನೆಯನ್ನು ಅವನಿಗೆ ಹೇಳಿದಳು. ಆಗ ಶೇಷಾಚಲನಿಗೆ ವಾಸ್ತವ ಅರಿವಾಗಿ, ದಿಗ್ಭ್ರಮೆಯಾಗಿ, ತನ್ನ ಕಣ್ಣನ್ನೆ ನಂಬುದವನಾಗುತ್ತಾನೆ. ಮುಂದೆ ಆಸ್ತಿಯ ಪಾಲಿನ ವಿಷಯ ಉದ್ಭವವಾಗುತ್ತದೆ.

ಒಟ್ಟಾರೆ ಶೇಷಾಚಲನು ತನ್ನ ಮುಗ್ಧತೆಯೊಂದಿಗೆ ಓದುಗರನ್ನು ಸೆಳೆಯುತ್ತಾನೆ. ಒಂದು ಕುಟುಂಬವನ್ನು ಸಾಕಲು ತನ್ನ ಕೊಡುಗೆಯು ಇರಲಿ ಎಂದು ಮನೆಯ ಎಲ್ಲರನ್ನೂ ನಂಬಿ ತಾನು ಮೋಸ ಹೋದರೂ ನ್ಯಾಯ, ನೀತಿ, ಧರ್ಮ, ನಿಷ್ಠೆಯನ್ನೆ ನಂಬಿ ಬದುಕು ಸಾಗಿಸುತ್ತಾ ಯುವಕರಿಗೆ ಆದರ್ಶವಾಗಿದ್ದಾನೆ.

### 4.2.5. ಸೀತಾರಾಮು (ಚಂದನದ ಗೊಂಬೆ)

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಯಾದ 'ಚಂದನದ ಗೊಂಬೆ'ಯಲ್ಲಿನ ಸೀತಾರಾಮಯ್ಯ ಪಾತ್ರವು ಒಂದು ಊರಿಗೆ ಉಪಕಾರಿಯಾಗುವ, ಎಲ್ಲರಲ್ಲೂ ಉತ್ತಮ ಗುಣಗಳನ್ನೇ ಹುಡುಕುವ, ಯಾರಿಗೂ ಕನಸು-ಮನಸಿನಲ್ಲಿಯೂ ಕೆಡುಕನ್ನು ಬಯಸದ, ತನ್ನ ಕೈಲಾದ ಸಹಾಯವನ್ನು ಸೋಮನಹಳ್ಳಿಯ ಜನತೆಗೆ

ಮಾಡುತ್ತಾ ಇನ್ನೊಬ್ಬರ ಹಾಗೆ ದ್ವೇಷ, ಅಸೂಯೆ, ಅಸತ್ಯ, ಕೆಡುಕು ಮಾಡಬೇಕೆನ್ನುವ ಮನಸ್ಸು ಇದಾವುದು ಆತನ ವ್ಯಕ್ತಿತ್ವದಲ್ಲೆ ಇಲ್ಲ. ಸೀತಾರಾಮು ಪಾತ್ರದ ಮೂಲಕ ಒಂದು ಸಾಮಾಜಿಕ ಸಂರಚನೆಯ ಹಾದಿಯಲ್ಲಿ ಯಾವುದೇ ದುರ್ಗುಣಗಳಿರದ, ಸತ್ಯಸಂಧತೆಯಲ್ಲೆ ಪರಮ ಸತ್ಯವನ್ನು ಕಾಣುವ ವ್ಯಕ್ತಿಯಾಗಿ ಸೀತಾರಾಮಯ್ಯ ಇಲ್ಲಿ ಕಾಣಿಸಿಕೊಳ್ಳುತ್ತಾನೆ.

ಸೀತಾರಾಮಯ್ಯ ಇಡೀ ಸೋಮನಹಳ್ಳಿಗೆ ಚಿರಪರಿಚಿತ ಹೆಸರು. ಎಲ್ಲರಿಗೂ ಅಚ್ಚುಮೆಚ್ಚಾಗಿದ್ದವನು. ಎಲ್ಲರನ್ನೂ ಆಕರ್ಷಿಸುವಂಥಾ ವ್ಯಕ್ತಿತ್ವ ಹೊಂದಿದ್ದವನು. 'ನಕ್ಕು ನಗಿಸುವ ಕಲೆ ಲೇಸು' ಎಂದು ಹೇಳಿದ ಸರ್ವಜ್ಞ ಕವಿಯ ಮಾತು ನಿಜ ಎನ್ನುವುದಾದರೆ ಸೀತರಾಮಯ್ಯ ಆ ದೃಷ್ಟಿಯಲ್ಲಿ ಮಹಾಕಲಾವಿದ. ಒಮ್ಮೊಮ್ಮೆ ತನ್ನ ಶಾನುಭೋಗಿಕ ವೃತ್ತಿಯನ್ನು ಮರೆತು ನಗುವಿನಲ್ಲೆ ಕಾಲ ಕಳೆದು ಎಲ್ಲಾ ಮುಗಿದ ನಂತರ ತನ್ನ ಕೆಲಸದ ಜರೂರನ್ನು ನೆನೆದು ಒದ್ದಾಡುತ್ತಿದ್ದವನು. ಆದ್ದರಿಂದ ತನ್ನ ಜೀವನದಲ್ಲಿ ಯಾವುದಕ್ಕೂ ಅಷ್ಟೊಂದು ಮಹತ್ವ ಕೊಡದೇ ಇಡೀ ಊರಿನ ಬಳಗವೇ ತನ್ನವರು ಎಂಬ ದೃಷ್ಟಿಧೋರಣೆಯನ್ನು ಸೀತಾರಾಮಯ್ಯ ಹೊಂದಿದ್ದನು.

ಸೀತಾರಾಮಯ್ಯ ಹುಟ್ಟಿದ ಐದೇ ವರ್ಷಕ್ಕೆ ಅವನ ತಾಯಿ ತೀರಿಕೊಂಡಿದ್ದರಿಂದ ತಂದೆ ನಾರಾಯಣಪ್ಪನವರೇ ಅವನಿಗೆ ತಂದೆ-ತಾಯಿ ಎರಡೂ ಆಗಿ ಸಾಕಿದರು. ಆದರೆ ಜವಾಬ್ದಾರಿಗಳನ್ನು ಕಲಿಯುತ್ತಿರುವ ಹೊತ್ತಿಗೆ ತಂದೆಯು ಕಣ್ಣುಮುಚ್ಚಿಕೊಂಡರು. ಅಲ್ಲಿನ ನೆರೆಹೊರೆಯವರ ಅನುಕಂಪ, ವಿಶ್ವಾಸಗಳಿಂದ ಇಡೀ ಊರಿಗೆ ಮಗನಾದ ರಾಘವೇಂದ್ರರಾಯರ ತಂದೆ ಶ್ರೀನಿವಾಸರಾಯರು ಹೇಳುತ್ತಿದ್ದ ಹಾಗೆ ಸೀತಾರಾಮು ನೀರಿದ್ದ ಹಾಗೆ ಯಾವ ಪಾತ್ರೆಗೆ ಹಾಕಿದರೆ ಅದೇ ಆಕಾರ. ಪಾಯಸಕ್ಕೆ ಹಾಕಿದರೆ ಯಾಲಕ್ಕಿ, ಸಾರಿಗೆ ಹಾಕಿದರೆ ಒಗ್ಗರಣೆ. ಸೀತಾರಾಮುವಿಗೆ ಹೆಚ್ಚಿನ ಆಸ್ತಿ ಇಲ್ಲದಿದ್ದರೂ ಬಂಗಾರದ ಗಣಿಯಂಥ ಹೃದಯ ನೀಡಿದ್ದ ಆ ಭಗವಂತ ಎಲ್ಲರನ್ನೂ 'ಅಣ್ಣ, ಅತ್ತೆ, ಮಾವ, ಅಕ್ಕ' ಎಂದು ಸಂಬೋಧಿಸಿಕೊಂಡೇ ಇಡೀ ಸೋಮನಹಳ್ಳಿಗೆ ಮನೆಮಗನಾಗಿದ್ದ.

ಶಾನುಭೋಗಿಕೆ ಮಾಡುತ್ತಿರುವಾಗ ಕಾಲಕ್ಕೆ ಸರಿಯಾಗಿ ಮಳೆಯಾಗದೆ, ಕೆರೆ ಒಣಗಿ ಪೈರು ಒಣಗಿ, ರೈತರ ಬಳಿ ಕಂದಾಯ ವಸೂಲಿ ಮಾಡುವ ಕಾಲ ಬಂದಾಗ ಆ ರೈತರ ಕಷ್ಟಕ್ಕೆ ಕರಗಿ ಕಂದಾಯ ವಸೂಲಿ ಮಾಡದೇ ಅಮಲ್ದಾರರ ಕೋಪಕ್ಕೂ ಹಲವು ಬಾರಿ ಗುರಿಯಾಗಿದ್ದ. ಅಂದರೆ ಸೀತಾರಾಮು ಕಷ್ಟಕ್ಕೆ ಕರಗುವ, ಕಣ್ಣೀರಿಗೆ ಮರುಗುವ ವ್ಯಕ್ತಿತ್ವ ಅವನದು. ಎಷ್ಟೋ ಬಾರಿ ರೈತರ ಕಂದಾಯವನ್ನು ಅವರ ಕಷ್ಟವನ್ನು ನೋಡಲಾಗದೇ ಇವನೇ ತನ್ನ ಸ್ವಂತ ಹಣದಿಂದಲೇ ಕಟ್ಟಿಬಿಡುತ್ತಿದ್ದನು.

ಸೀತಾರಾಮುವಿಗೆ ಮದುವೆಯ ಬಗ್ಗೆ ಅಂಥ ಅಭಿಪ್ರಾಯವೇನು ಇರಲಿಲ್ಲ. ಎಲ್ಲರ ಹಾಗೆ ಮದುವೆ ಮಾಡಿಕೊಂಡು, ಸಂಸಾರ ಮಾಡಬೇಕೆಂಬ ಯಾವ ಆಲೋಚನೆಯು ಇವನಿಗೆ ಇರಲಿಲ್ಲ. ಯಾರಾದರೂ

ಮದುವೆ ಬಗ್ಗೆ ಪ್ರಸ್ತಾಪಿಸಿದರೆ ಸೀತಾರಾಮು ನನಗೆ ಮದುವೆ ಬೇರೆ ಕೇಡು, ನನಗಿರೋ ಶ್ರೀಮಂತಿಕೆಗೆ ಮದುವೆ ಬೇರೆ ಬೇಕೇ? ಅಲಾಲುಟೋಪಿ ಆಗಿರುವ ಮನುಷ್ಯನಾಗಿರುವುದರಿಂದ ಇನ್ನೊಂದು ಹೆಣ್ಣಿನ ಜೀವನವನ್ನು ನಾನು ಹಾಳು ಮಾಡಬಾರದೆಂಬ ಅನಿಸಿಕೆ ಅವನದಾಗಿತ್ತು. ಮನಸ್ಸಿಗೆ ತೋಚಿದ್ದನ್ನು ಹೇಳಿಬಿಡುವ ಸ್ವಭಾವದವನು.

ಸೀತಾರಾಮುವು ಮದುವೆಯ ಬಗ್ಗೆ ತನ್ನದೇ ಅನಿಸಿಕೆ, ಅಭಿಪ್ರಾಯಗಳನ್ನು ಹೇಳಿಕೊಳ್ಳುತ್ತಾ ಸಾಗುತ್ತಿದ್ದರೆ ಅವನ ಅದೃಷ್ಟವೋ ಎಂಬಂತೆ ಅವನಿಗೆ ತಕ್ಕನಾದ ಅವನ ವ್ಯಕ್ತಿತ್ವಕ್ಕೆ ಸಂಪೂರ್ಣವಾಗಿ ಹೊಂದಿಕೊಳ್ಳುವ ಹೆಣ್ಣು ಅವನ ಮನೆಯನ್ನು ಮನವನ್ನು ಸೇರುವ ಕಾಲವು ಸಮೀಪಿಸಿತು. ಒಮ್ಮೆ ಸಾಕಷ್ಟು ದೂರದ ಪ್ರಯಾಣ ಮುಗಿಸಿ ವಿಶ್ರಾಂತಿ ಪಡೆಯಲು ಕೆರೆಸಂತೆಹಳ್ಳಿಯ ಲಕ್ಷ್ಮಣರಾಯರು ಶ್ರೀನಿವಾಸರಾಯರ ಮನೆಯ ಜಗಲಿ ಕಟ್ಟೆಯ ಮೇಲೆ ಬಂದು ಕುಳಿತಿದ್ದರು. ಇದನ್ನು ಗಮನಿಸಿದ ಶ್ರೀನಿವಾಸರಾಯರು ಅವರ ಎಲ್ಲಾ ವಿಷಯಗಳನ್ನು ಸಾವಧಾನದಿಂದ ಆಲಿಸಿ ಒಂದು ನಿರ್ಧಾರ ಮಾಡಿದರು. ಯಾಕೆಂದರೆ ಲಕ್ಷ್ಮಣರಾಯರು ವಯಸ್ಸಿಗೆ ಬಂದ ಮಗಳು ರತ್ನಮ್ಮನನ್ನು ಒಂದು ಒಳ್ಳೆಯ ವರನಿಗೆ ನೀಡಬೇಕೆಂದು ಕಳೆದ ಮೂರು ವರ್ಷಗಳಿಂದ ಹುಡುಕಾಡಿದರು. ಆದರೆ ಅಂಥ ವರ ಅವರಿಗೆ ದೊರಕಿರಲಿಲ್ಲ.

ಶ್ರೀನಿವಾಸರಾಯರು ತಂದೆಯ ಸ್ಥಾನದಲ್ಲಿದ್ದು ಸೀತಾರಾಮುವಿನ ಗುಣಕ್ಕೆ ಹೊಂದಿಕೊಳ್ಳುವ ವಧುವಾಗಿದ್ದರೆ ಅವನಿಗೆ ಮದುವೆ ಮಾಡಿಸಿಬಿಡಬೇಕು ಎಂದು ಮನದಲ್ಲೆ ಲೆಕ್ಕಚಾರ ಹಾಕಿ ಲಕ್ಷ್ಮಣರಾಯರ ಬಳಿ ಎಲ್ಲವನ್ನು ಹೇಳಿದರು.

ಮುಂದೆ ಶ್ರೀನಿವಾಸರಾಯರು ಅವರ ಧರ್ಮ ಪತ್ನಿ ಕಮಲಮ್ಮನವರು ಕೆರೆಸಂತೆಹಳ್ಳಿಗೆ ಹೋಗಿ ಹುಡುಗಿಯನ್ನು ನೋಡಿಕೊಂಡು ಬಂದು ಅದೇ ದಿನವೇ ಲಗ್ನವನ್ನು ನಿಶ್ಚಯಿಸಿಕೊಂಡು ಹೊರಟು ಹೋದರು.

ಸೀತರಾಮು ಒಬ್ಬ ಸಂಪ್ರದಾಯಸ್ಥ, ಸಭ್ಯಸ್ಥ, ಸುಸಂಸ್ಕೃತ ಎನ್ನಲು ಮತ್ತೊಂದು ಉದಾಹರಣೆ ಎಂದರೆ ಹೆಣ್ಣು ನೋಡುವ ಶಾಸ್ತ್ರ ಮುಗಿಸುವ ಎಲ್ಲವನ್ನೂ ತನ್ನ ಅತ್ತೆ–ಮಾವನಿಗೆ ವಹಿಸಿ ಅವರು ತನ್ನ ಯೋಗಕ್ಷೇಮವನ್ನೇ ಬಯಸುವವರು. ಅವರು ಏನೇ ಮಾಡಿದರೂ ತನ್ನ ಒಳ್ಳೆಯದಕ್ಕೆಂದೇ ನಂಬಿ ಅವರಿಗೆ ಮದುವೆಯ ಎಲ್ಲಾ ಜವಾಬ್ದಾರಿಯನ್ನು ವಹಿಸಿಕೊಟ್ಟಿದ್ದನು. ಅದಕ್ಕೆ ಕಿಂಚಿತ್ತೂ ಊನವಾಗದಂತೆ ಶ್ರೀನಿವಾಸರಾಯರು–ಕಮಲಮ್ಮನವರು ಸೀತಾರಾಮುವಿನ ಶ್ರೇಯೋಭಿವೃದ್ಧಿಗೆ ಶ್ರಮ ಪಡುತ್ತಿದ್ದರು.

ಸೀತಾರಾಮು ತನ್ನ ಮದುವೆಗೆ ತನ್ನ ಊರಿನ ಯಾವ ಜನರನ್ನು ಆಹ್ವಾನ ಮಾಡುವುದಿಲ್ಲ. ಇಲ್ಲಿ ಇವನ ಸ್ವಾರ್ಥಕ್ಕಿಂತ ತನಗೆ ಹೆಣ್ಣು ನೀಡುವ ಮನೆಯವರಿಗೆ ಖರ್ಚು ವೆಚ್ಚವಾಗಿ ಅವರಿಗೆ ಕಷ್ಟ ನೀಡುವುದು ಸೀತಾರಾಮುವಿಗೆ ಇಷ್ಟವಿರಲಿಲ್ಲ. ಮತ್ತೊಂದೆಡೆ ಸೀತಾರಾಮುವಿನ ಒಳ್ಳೆಯತನವನ್ನು ನೋಡಿದ್ದ, ನೋಡುತ್ತಿದ್ದ

ಸೋಮನಹಳ್ಳಿ ಜನತೆಯು ತಮ್ಮ ಸ್ವಂತ ಖರ್ಚಿನಲ್ಲೆ ಆ ಮದುವೆಯನ್ನು ವಿಜೃಂಭಣೆಯಿಂದ ಮಾಡುತ್ತೇವೆಂದು ಪಣ ತೊಟ್ಟರು. ಇದು ಸೀತಾರಾಮುವಿನ ನಿಷ್ಕಲ್ಮಶ ಮನಸ್ಸಿಗೆ ಸಿಕ್ಕ ನಿಜವಾದ ಗೌರವವಾಗಿದೆ.

ಸೀತಾರಾಮುವಿಗೆ ಮದುವೆಯಾದರೂ ಅವನ ವ್ಯಕ್ತಿತ್ವದಲ್ಲಿ ಯಾವುದೇ ಬದಲಾವಣೆಯಾಗಿರಲಿಲ್ಲ. ಊರಿನವರಿಗೆ ತನ್ನ ಮನೆಯವರಿಗೆ ಮದುವೆ ಮುಂಚೆ ಹೇಗಿದ್ದನೋ ನಂತರವೂ ಹಾಗೆಯೇ ಇದ್ದ. "ಒಳ್ಳೆಯವರಿಗೆ ಭಗವಂತ ಒಳ್ಳೆಯದನ್ನೇ ಕರುಣಿಸುತ್ತಾನೆ" ಎಂಬಂತೆ ಹೆಂಡತಿ ರತ್ನಮ್ಮನು ಸಹ ಇವನ ವ್ಯಕ್ತಿತ್ವಕ್ಕೆ ಸರಿಸಾಟಿಯಾಗ ಬಲ್ಲಂಥವಳಾಗಿದ್ದಳು.

ಒಟ್ಟಾರೆ "ಚಂದನದ ಗೊಂಬೆ" ಕಾದಂಬರಿಯ ಮೂಲಕ ಸೀತಾರಾಮು ಪಾತ್ರಕ್ಕೆ ವಿಶೇಷ ಮನ್ನಣೆ ನೀಡಿದ್ದು, ಆಧುನಿಕವಾಗಿ ಇರುವ ಎಷ್ಟೋ ಒಳ್ಳೆಯ ವ್ಯಕ್ತಿತ್ವದ ಗಂಡಸರನ್ನು ಪ್ರತಿನಿಧಿಸುತ್ತಾನೆ. ಸೀತಾರಾಮುವು ಅಪ್ಪಟ ಬಂಗಾರದಂಥವನಾಗಿದ್ದು, ಅವನ ವ್ಯಕ್ತಿತ್ವವೇ ಅದನ್ನು ಸಾರಿ ಹೇಳುತ್ತಿದೆ.

**4.2.6. ಸಿಂಗಾರು (ಮಸಣದ ಹೂವು)**

ತ.ರಾ.ಸು ಅವರ 'ಮಸಣದ ಹೂವು' ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳಂತೆಯೇ ಬಹುಮುಖ್ಯ ಪಾತ್ರ ವಹಿಸುವ ಪಾತ್ರವೆಂದರೆ ಸಿಂಗಾರು. ಈ ಪಾತ್ರದ ಮೂಲಕ ತ.ರಾ.ಸು ಅವರು ಕೆಸರಿನಲ್ಲಿ ಹುಟ್ಟಿದ ಕಮಲದ ಹಾಗೆ ಈ ಪಾತ್ರವನ್ನು ಸೃಷ್ಟಿಸಿದ್ದಾರೆ. ಏಕೆಂದರೆ ಕಾಲಗರ್ಭದಲ್ಲಿ ಏನು ಹುದುಗಿಹುದೋ ಯಾರು ತಿಳಿದಿದ್ದಾರೆ. ಆ ಮೂಲಕ ಜೀವನದ ಬಗ್ಗೆ ಹಲವು ಕನಸುಗಳನ್ನು ಹೊತ್ತಿದ್ದ ಸಿಂಗಾರುವಿಗೆ ಕಾಲದ ಕೈಗೆ ಸಿಲುಕಿ ತನ್ನ ಜೀವನವು ದುರಂತವೆಂಬ ಪರಿವಿಡಿಯಲ್ಲಿ ಹಲವು ಪಾಠಗಳಾಗಿ ಚದುರಿ ಹೋಗುತ್ತದೆ ಎಂದು ಕನಸಲ್ಲೂ ಎಣಿಸಿರಲಿಲ್ಲವೇನೋ – ಏಕೆಂದರೆ ಬಡತನದ ಬೇಗೆಯಲ್ಲಿ ನರಳುತ್ತಿದ್ದ ಸಿಂಗಾರು ತನ್ನ ಡಿಗ್ರಿಯು ಜೀವನವನ್ನು ರಸಪಾಕವನ್ನಾಗಿ ಮಾಡುತ್ತದೆ ಎಂದು ಊಹಿಸಿದ್ದ. ಆದರೆ ಪ್ರತಿದಿನವೂ, ಪ್ರತಿಕ್ಷಣವೂ ನೋವಿನ ನರಳಾಟಗಳ ಮಧ್ಯೆಯೇ ಸಂತೋಷವನ್ನು ಹುಡುಕುವ ಪ್ರಯತ್ನದಲ್ಲಿದ್ದ. ಹೇಗಾದರೂ ಮಾಡಿ ತನ್ನ ಬಳಿಯಿರುವ ಪದವಿಯ ಮೂಲಕ ಒಳ್ಳೆಯ ಕೆಲಸವನ್ನು ಸಂಪಾದಿಸಬೇಕು, ತನ್ನ ತಾಯಿಯನ್ನು ಸುಖವಾಗಿಟ್ಟುಕೊಳ್ಳಬೇಕು ಎಂದವನಿಗೆ ಜೀವನವೆಂಬ ವಾಸ್ತವತೆ ತನ್ನ ಕರಾಳವಾದ ಬದುಕಿನ ಕಷ್ಟಗಳನ್ನು ಬಂಡವಾಳ ಮಾಡಿಕೊಂಡು ತನ್ನನ್ನು ಕಾಲದ ಚಕ್ರದಲ್ಲಿ ಸಿಲುಕಿ ಅದರ ನೃತ್ಯಕ್ಕೆ ತಕ್ಕಂತೆ ಆಡುವ ಗೊಂಬೆಯಾಗಿ ಹೋದನು.

ಈಗ ಸಿಂಗಾರು ಬರೀ ಸಿಂಗಾರುವಾಗಿ ಉಳಿದಿಲ್ಲ. ಸಿರ್‌ಪಕಡು ಸಿಂಗಾರು. ತಲೆಹಿಡುಕ ಕೆಲಸವೇ ಆತನಿಗೆ ಬದುಕನ್ನು ನಡೆಸುವ ಊರುಗೋಲಾಗಿದೆ. ಅದನ್ನು ಬಿಟ್ಟರೆ ಜೀವನದಲ್ಲಿ ಕಿತ್ತು ತಿನ್ನುವ ಬಡತನದ ಅಡಿಗೆ ತಾನು ಸಿಲುಕಬೇಕಾಗುತ್ತದೆ. ಆದ್ದರಿಂದ ಜೀವನ ನಿರ್ವಹಣೆಗೆ ಯಾರು ಏನೇ ಎಂದರೂ, ತನ್ನನ್ನು ಹೀಗಳೆದರೂ, ಅವಮಾನ ಮಾಡಿದರೂ ಪರವಾಗಿಲ್ಲ. ಏಕೆಂದರೆ ತನ್ನ ವೃತ್ತಿಯೇ ಅದಾಗಿದ್ದು ಈಗಾಗಲೇ ಸಮಾಜದಿಂದ ತಲೆಹಿಡುಕನೆಂಬ ಹಣೆಪಟ್ಟಿ ಕಟ್ಟಿಕೊಂಡವನಿಗೆ, ಈಗಾಗಲೇ ಬೈಗುಳಗಳ ಸುರಿಮಳೆಯೇ ತನ್ನ ಬದುಕಿನ ಮೇಲೆ ಆಗಿದ್ದು ನಿತ್ಯ ನಿರಂತರವಾಗಿ ನಡೆಯುತ್ತಿರುವ ಸಾಮಾನ್ಯ ಸಂಗತಿಯಾಗಿದೆ.

ಈಗ ಚಿನ್ನಮ್ಮನ ಮನೆಯ ತಲೆ ಹಿಡುಕ ಸಿಂಗಾರುವಿನ ಕಿವಿಗೆ ಆ ಶಬ್ದ ಕರ್ಕಶವಾಗಿ ಗರಗಸವಾಗಿ ಆ ಹೆಸರು ಕೇಳಿದಾಗ ಬೇಸರವಾಗುತ್ತದೆ. ಆ ರೀತಿ ಕರೆದವರ ಮೇಲೆ ಸಿಂಗಾರುವಿಗೆ ಸಿಟ್ಟು ಬರುತ್ತಿತ್ತು. ಈಗ ಯಾರಾದರೂ ಅವನ ಬಳಿ ಈ ಬಗ್ಗೆ ಕೇಳಿದರೆ 'ನಾನು ತಲೆಹಿಡುಕ'ನಲ್ಲ ಗಂಭೀರವಾಗಿ 'ಏಜೆಂಟ್' ಎಂದು ಹೇಳಿಕೊಳ್ಳುತ್ತಾನೆ. ಸಿಂಗಾರುವಿನ ಹಿನ್ನೆಲೆ ನೋಡುವುದಾದರೆ ಸಿಂಗಾರು ವೇಲು ಸಾಮಿಲ್ಸ್‌ನಲ್ಲಿ ಕೆಲಸವನ್ನು ಮಾಡುತ್ತಿದ್ದ ಒಬ್ಬ ಸಾಮಾನ್ಯ ಯುವಕ. ಕೆಲಸವೆಂದರೆ ಅವನಿಗೆ ಎಲ್ಲಿಲ್ಲದ ಪ್ರೀತಿ. ಸಾಮಿಲ್ಸ್‌ನಲ್ಲಿರುವ ಯಂತ್ರಕ್ಕೂ ತನಗೂ ಒಂದು ಅವಿನೋಭಾವ ಸಂಬಂಧವಿದ್ದಂತೆ ಅದರ ಜೊತೆಗೆ ಅನ್ಯೋನ್ಯ ಭಾವದಲ್ಲಿದ್ದನು. ಅವನ ವೃತ್ತಿಪರತೆ ನೋಡಿ ಆ ಸಾಮಿಲ್‌ನಲ್ಲಿ ಕೆಲಸ ಮಾಡುವ ಎಲ್ಲಾ ಗಂಡಸರಿಗೂ, ಹೆಂಗಸರಿಗೂ ಎಲ್ಲರಿಗೂ ಅಚ್ಚುಮೆಚ್ಚಿನ ವ್ಯಕ್ತಿಯಾಗಿದ್ದನು. ಎಲ್ಲರ ಜೊತೆ ಸಲುಗೆಯಿಂದ ಅಷ್ಟೇ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದ ಸಿಂಗಾರುವೇಲು ತನ್ನಲ್ಲಿದ್ದ ಬಡತನವನ್ನಾಗಲಿ, ಜೀವನ ನಿರ್ವಹಣೆ ಮಾಡಲು ತನ್ನಿಂದಾಗದು ಎಂದು ಯಾವತ್ತು ತಲೆ ಮೇಲೆ ಕೈ ಹೊತ್ತು ಕುಳಿತುಕೊಳ್ಳುವ ಜಾಯಮಾನದವನಲ್ಲ.

ಸಾ ಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದ ಸಿಂಗಾರುವೇಲುವಿಗೆ ತಾನು ಕೆಲಸ ಮಾಡುತ್ತಿದ್ದ ಯಂತ್ರದಲ್ಲಿ ಯಾವುದೋ ದೋಷವಿದೆಯೆಂದು ಅರಿಯದೇ ಯಾವುದೋ ಜ್ಞಾಪಕದಲ್ಲಿ ತನ್ನ ಕೈಯನ್ನು ಗರಗಸದಂಥ ಯಂತ್ರಕ್ಕೆ ಕೊಟ್ಟು ಬಿಟ್ಟನು. ಈ ಮೂಲಕ ತನ್ನ ಎಡಗೈ ಅರ್ಧ ಭಾಗ ಕತ್ತರಿಸಿ ಹೋಗಿತ್ತು. ಆ ಸಮಯದಲ್ಲೂ ಸಾಮಿಲ್‌ನ ಮ್ಯಾನೇಜರ್‌ನು ಎರಡು ದಿನ ಸಂಬಳದ ರಜೆ ಕೊಡುವುದಕ್ಕೆ ನಿರಾಕರಿಸಿದನು. ಒಂದು ತಿಂಗಳಿನ ಶುಶ್ರೂಷೆ ಮುಗಿಸಿ ಆಸ್ಪತ್ರೆಯಿಂದ ಹೊರ ಬಂದ ಸಿಂಗಾರುವೇಲುವಿಗೆ ತನ್ನನ್ನು ಕೆಲಸದಿಂದ ತೆಗೆದು ಹಾಕಿದ್ದಾರೆಂಬ ಕಹಿ ಸುದ್ದಿ ಅವನ ಕಿವಿಗೆ ಅಪ್ಪಳಿಸಿತು.

ಜೀವನ ನಿರ್ವಹಣೆಗೆ ಮಾಡುತ್ತಿದ್ದ ಕೆಲಸವು ಸಂಜೆಯ ವೇಳೆಗೆ ಹೋಗಿ ಬೇಕಾದಾಗ ಕಿತ್ತುಕೊಳ್ಳಬಹುದಾದ ಬೇಲಿಯ ಹೂವಲ್ಲವೆಂದು ಮನವರಿಕೆಯಾಯಿತು. ಎಲ್ಲೆ ಹೋದರೂ ಅವನಿಗೆ ಸಿಗುತ್ತಿದುದು ಒಂದೇ ಉತ್ತರ ಕೆಲಸವಿಲ್ಲ. ದಯೆ, ಅನುಕಂಪ, ಸಹಾನುಭೂತಿ, ಕೃತಜ್ಞತೆ, ಔದಾರ್ಯ ಯಾವುದಕ್ಕೂ ಬೆಲೆ ಇಲ್ಲದ ಈ ಜಗತ್ತನ್ನು ಸುಡಬೇಕೆನಿಸಿತು. ಅವನೆದೆಯಲ್ಲಿ ಕಡೆದು ಬಂದ ಹಾಲಾಹಲದ

ಂಜಿನುರಿಯಲ್ಲಿ ದೇವರ ನೆನಪು ಸತ್ತು ಹೋಗಿ ದೇವರಿಲ್ಲ ಎಂಬ ತೀರ್ಮಾನಕ್ಕೆ ಬಂದನು. ತನ್ನ ಕೈಲಿದ್ದ ಾಲ್ಕಾರು ಆಣೆ ಎಲ್ಲವೂ ಮುಗಿದು ಊಟಕ್ಕಾಗಿ ಭಿಕ್ಷೆ ಬೇಡುವಂತಾದನು.

ಹೀಗೆ ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಮಾರ್ಕೆಟ್‌ನ ಹಿಂಭಾಗದ ರಸ್ತೆಯಲ್ಲಿ ಕುಳಿತಿರುವಾಗ ಮಿಲಿಟರಿಯೊಬ್ಬ ಅಲ್ಲಿಗೆ ಬಂದು ಇಲ್ಲಿ ಯಾವುದಾದರೂ ಸೂಳೆ ಮನೆಯನ್ನು ತೋರಿಸು ಎಂದು ಕೇಳಿದನು. ಮೊದಲು ಗೊತ್ತಿಲ್ಲವೆಂದ ಸಿಂಗಾರು ಬಕ್ಷೀಸ್‌ನ ವಿಷಯ ಬಂದಾಗ ಬದುಕಿನ ಬಂಡಿ ಎಳೆಯಲು ಈ ವೃತ್ತಿಯೇ ಸರಿ ಎಂದು ತೀರ್ಮಾನಿಸಿದನು. ಐದು ರೂಪಾಯಿಯನ್ನು ತೆಗೆದುಕೊಂಡು ಚಿನ್ನಮ್ಮನ ವೇಶ್ಯಾವಾಟಿಕೆಯ ಅಡ್ಡೆಗೆ ಗಿರಾಕಿಯನ್ನು ಕರೆ ತಂದ. ಮುಂದೆ ಸಿಂಗಾರು ಚಿನ್ನಮ್ಮನ ಬಳಿ ಲೋಕಾಭಿರಾಮವಾಗಿ ಮಾತಾಡುತ್ತಾ ತಾನು ಈ ಕೆಲಸ ನಿರಂತರವಾಗಿ ಮಾಡುವುದಾಗಿ ಒಪ್ಪಿಕೊಂಡು ತನಗೆ ಗಿರಾಕಿಗೆ ತಕ್ಕಂತೆ ಹಣವನ್ನು ನೀಡಬೇಕೆಂದು ಚಿನ್ನಮ್ಮನ ಜೊತೆಗೆ ಒಪ್ಪಂದ ಮಾಡಿಕೊಂಡನು.

ಈ ಮೂಲಕ ನಿರಂತರವಾಗಿ ತಾನು ಗಿರಾಕಿಗಳನ್ನು ಚಿನ್ನಮ್ಮನ ಮನೆಬಾಗಿಲಿಗೆ ಕರೆದುಕೊಂಡು ಹೋಗಿ ಬಿಡುವುದು ನಿತ್ಯ ಕಾಯಕವಾಗಿತ್ತು. ಸಿಂಗಾರು ತನ್ನ ಬದುಕಿನ ನಿರ್ವಹಣೆಗಾಗಿ ಯಾವುದೇ ಮುಜುಗರವಿಲ್ಲದೇ ತನ್ನ ಕೆಲಸವನ್ನು ಮಾಡುತ್ತಿದ್ದನು. ಈ ಮಧ್ಯೆ ಸಿಂಗಾರುವಿಗೆ ಆ ವೇಶ್ಯಾವಾಟಿಕೆಯ ಮಹಾಕೂಪದಲ್ಲಿ ಬಿದ್ದು ಬಳಲಿ ಬೆಂಡಾಗಿದ್ದ ಪಾರ್ವತಿಯ ಮೇಲೆ ಪ್ರೇಮಾಂಕುರವಾಗುತ್ತದೆ. ಅದನ್ನು ಹಲವು ಬಾರಿ ಚಿನ್ನಮ್ಮನ ಬಳಿಯು ಹೇಳಿದ್ದನು. ಆದರೆ ಚಿನ್ನದ ಮೊಟ್ಟೆ ಇಡುತ್ತಿದ್ದ ಪಾರ್ವತಿಯನ್ನು ಕಳುಹಿಸಿಕೊಡಲು ಚಿನ್ನಮ್ಮ ಸುತಾರಾಂ ಒಪ್ಪಲಿಲ್ಲ. ಹಾಗೆಯೇ ಪಾರ್ವತಿಗೂ ಸಿಂಗಾರುವಿನ ಮೇಲೆ ಪ್ರೀತಿ ಇದ್ದರೂ ಅದನ್ನು ತೋರಗೊಡದೇ ಈ ಮಾಂಸದ ಮುದ್ದೆಯಾಗಿರುವ ತನ್ನ ಮೇಲೆ ಇದೆಂಥಾ ಪ್ರೀತಿ ಪ್ರೇಮದ ಹುಚ್ಚು ಎಂದು ಒಮ್ಮೆ ಹೇಳಿದ್ದಳು.

ಒಟ್ಟಾರೆ 'ಮಸಣದ ಹೂವು' ಕಾದಂಬರಿಯಲ್ಲಿ ಸಿಂಗಾರುವಿನ ಪಾತ್ರ ಬದುಕಿನ ಬಂಡಿಯನ್ನು ಎಳೆಯುವ ಸಲುವಾಗಿ ಕತ್ತಲೆ ತುಂಬಿದ ಈ ಪ್ರಪಂಚದಲ್ಲಿ ತುತ್ತು ಅನ್ನಕ್ಕೂ ಒದ್ದಾಡುತ್ತಿರುವ ಸಮಯದಲ್ಲಿ, ಇಡೀ ಸಮಾಜದಲ್ಲಿ ಬರೀ ವಂಚನೆ, ಕಪಟ ತುಂಬಿರುವಾಗ ತನ್ನ ಕೆಲಸದ ಬಗ್ಗೆ ಮುಜುಗರವಿಲ್ಲದೆ ತನ್ನ ಕಾಯಕದಲ್ಲಿ ತೊಡಗಿದ್ದನು.

## 4.3 ಸಾಮಾಜಿಕ ಸಮಸ್ಯೆಗಳು

19ನೇ ಶತಮಾನದಲ್ಲಿ ಭಾರತೀಯ ಸಾಹಿತ್ಯದಲ್ಲಿ ಹಲವು ಬದಲಾವಣೆಗಳ ಪರ್ವಕಾಲವನ್ನು ಕಾಣಬಹುದು. ಕಾರಣವೇನೆಂದರೆ ಭಾರತೀಯ ಸಾಹಿತ್ಯವು ಹೊಸ ಮಗ್ಗುಲಿಗೆ ತನ್ನನ್ನು ತೆರೆದುಕೊಂಡ ಕಾಲವೆನ್ನಬಹುದು. ಇದು ಕನ್ನಡ ಸಾಹಿತ್ಯಕ್ಕೆ ಹೊರತಾಗಿರಲಿಲ್ಲ. ಇಲ್ಲಿಯವರೆಗೂ ಸಾಹಿತ್ಯವು ಕೇವಲ ಸೂರ್ಯ, ಚಂದ್ರ, ನಕ್ಷತ್ರ, ಮಳೆ, ಆಕಾಶ, ಭೂಮಿ, ಬೆಳದಿಂಗಳು ಮುಂತಾದ ಅಂಶಗಳ ಬಗೆಗೆ ವರ್ಣನಾತ್ಮಕ ಪದಗಳ ಮೂಲಕ ಸಾಹಿತ್ಯದ ರಚನೆಯಾಗುತ್ತಿತ್ತು. ಆದರೆ ಇದೇ ಸಮಯದಲ್ಲಿ ಭಾರತದ ನೈಜಸ್ಥಿತಿಯನ್ನು ಸಾಹಿತ್ಯದಲ್ಲಿ ಹೇಳಲು ಕೆಲವು ಸಾಹಿತಿಗಳು ತಮ್ಮ ಹರಿತವಾದ ಬರವಣಿಗೆಗಳ ಮೂಲಕ ವಾಸ್ತವತೆಯ ಪರಿಚಯ ಮಾಡತೊಡಗಿದರು. ಇದೇ ಸಾಹಿತ್ಯ ಚಳುವಳಿಯೇ ಪ್ರಗತಿಶೀಲ. ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಣನೆಗಳನ್ನು ಕಡಿಮೆ ಮಾಡಿ ನಿಜವಾದ ಸಾಮಾಜಿಕ ಸಮಸ್ಯೆಗಳು, ಅವುಗಳ ನೈಜಸ್ಥಿತಿಯನ್ನು ತಮ್ಮ ಕೃತಿಗಳಲ್ಲಿ ಕಣ್ಣಿಗೆ ಕಟ್ಟುವಂತೆ ಹೇಳತೊಡಗಿದರು. ಆ ಕೃತಿಗಳಲ್ಲಿನ ಪಾತ್ರಗಳು ಭಾರತೀಯ ಮಧ್ಯಮ ವರ್ಗದ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಿದ್ದವು. ವಾಚಕರು ಕೂಡಾ ಆ ಪಾತ್ರಗಳ ಮೂಲಕ ತಮ್ಮ ಬದುಕಿನ ಬವಣೆಗಳನ್ನು ಓದಿ ಆ ಸಾಹಿತ್ಯವನ್ನು ಹೆಚ್ಚು ಇಷ್ಟಪಡಲು ಆರಂಭಿಸಿದರು. ಅದರಲ್ಲೂ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಪ್ರಕಾರವು ಹೆಚ್ಚು ಆಕರ್ಷಿತವಾಗುತ್ತಿತ್ತು. ಈ ಮೂಲಕ ಹಲವು ಪ್ರಗತಿಶೀಲ ಕಾದಂಬರಿಕಾರರು ಹೆಚ್ಚು ಹೆಚ್ಚು ಕಾದಂಬರಿಗಳ ರಚನೆಗೆ ಮುನ್ನುಡಿ ಬರೆದರು. ಮುಂದೆ ಅದು ಬೃಹತ್ ಮಟ್ಟಕ್ಕೆ ಕೊಂಡೊಯ್ದರೂ ಕೂಡ ಪ್ರಗತಿಶೀಲ ಸಾಹಿತ್ಯಕ್ಕೆ ಕೆಲವೇ ವರ್ಷಗಳಲ್ಲಿ ಹಿನ್ನೆಡೆಯಾಯಿತು. ಅದಕ್ಕೆ ಕಾರಣ ಸಾಮಾಜಿಕ ಸಮಸ್ಯೆಗಳನ್ನು ಉತ್ಕೃಷ್ಟ ಮಟ್ಟದಲ್ಲಿ ತಮ್ಮ ಕಾದಂಬರಿಗಳಲ್ಲಿ ಸೃಷ್ಟಿಸಿದರೂ ಕೂಡಾ, ಆ ಯಾವುದೇ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳುವ ಕೆಲಸ ಮಾಡಲಿಲ್ಲ. ಅದಕ್ಕೆ ಪ್ರಗತಿಶೀಲ ಸಾಹಿತ್ಯವು ಆರಂಭದಲ್ಲಿ ಹೆಚ್ಚಿನ ಮನ್ನಣೆ ಗಳಿಸಿದರೂ ಕೂಡ ಮುಂದೆ ಸಾಗುತ್ತ ವಿಫಲತೆಯ ದಾರಿಯನ್ನು ಹಿಡಿಯಿತು.

ಪ್ರಗತಿಶೀಲ ಸಾಹಿತ್ಯದಲ್ಲಿ ಕಂಡುಬರುವ ಪ್ರಮುಖ ಸಾಮಾಜಿಕ ಸಮಸ್ಯೆಗಳೆಂದರೆ ಹಸಿವು, ಬಡತನ, ನಿರುದ್ಯೋಗ, ಜಾತಿಪದ್ಧತಿ, ಲಿಂಗ ತಾರತಮ್ಯ, ಸಾಮಾಜಿಕ ತಾರತಮ್ಯ ಇವುಗಳಲ್ಲಿ ಬಡತನದ ವಿಚಾರವನ್ನು ಹಲವು ಕಾದಂಬರಿಗಳಲ್ಲಿ ಪ್ರಮುಖ ಅಂಶವಾಗಿ ಬಳಸಿಕೊಂಡಿದ್ದಾರೆ. ಅದನ್ನು ತ.ರಾ.ಸು.ರವರ ಹಲವು ಕಾದಂಬರಿಗಳಲ್ಲೂ ಕಾಣಬಹುದು. ತ.ರಾ.ಸು. ರವರು ಮುಖ್ಯವಾಗಿ ಪ್ರತಿಭಟನಾ ಧೋರಣೆಯನ್ನು ಹೊಂದಿದ್ದರಿಂದ ಸಮಾಜದ ಹಲವು ಸಮಸ್ಯೆಗಳ ಬಗ್ಗೆ ಇವರಿಗೆ ಅಸಮಾಧಾನವಿತ್ತು. ಸಾಮ್ರಾಜ್ಯಶಾಹಿ ಧೋರಣೆಯನ್ನು ಅವರು ಖಂಡಿಸುತ್ತಿದ್ದರು. ಬಂಡವಾಳಶಾಹಿ ದರ್ಪವನ್ನು ಅವರು ಸಾರಸಗಟಾಗಿ ಮರುಮಾತಿಲ್ಲದೆ ವಿರೋಧಿಸುತ್ತಿದ್ದರು. ಮಧ್ಯಮ ವರ್ಗದ ಜನರ ಬದುಕು ಹಸನಾಗದಿದ್ದರೆ ಸಾಮಾಜಿಕ ಸಮಾನತೆ ಸಾಧ್ಯವಿಲ್ಲ. ಅದು ಸಾಧ್ಯವಾಗಬೇಕಿದ್ದರೆ ಶ್ರಮಿಕ ವರ್ಗವು ಬಂಡವಾಳ ಶಾಹಿ ಧೋರಣೆ ವಿರುದ್ಧ ತಿರುಗಿ ಬೀಳಬೇಕು ಎಂದು ಹೇಳುತ್ತಿದ್ದರು.

ತ.ರಾ.ಸು. ರವರ 'ಪಂಜರದ ಪಕ್ಷಿ' ಎಂಬ ಸಾಮಾಜಿಕ ಕಾದಂಬರಿಯಲ್ಲಿ ಪ್ರಮುಖವಾಗಿ ಕಂಡು ಬರುವ ಸಮಸ್ಯೆಯೆಂದರೆ ಅದು ಬಡತನ. ಮಡಿವಂತಿಕೆಯ ಸಮಾಜದಲ್ಲಿ ತನ್ನ ಮಗಳು ಕೋಮಲಾಳನ್ನೇ ಕೆಲಸಕ್ಕೆ ಕಳುಹಿಸಲು ತಂದೆ ಗೋವಿಂದರಾಯರು ನಿರ್ಧರಿಸುವುದು ಅಂದಿನ ಸಾಮಾಜಿಕ ಕಟ್ಟಳೆಗಳಿಗೆ ವಿರುದ್ಧವಾಗಿದೆ. "ವಯಸ್ಸಿಗೆ ಬಂದ ಹೆಣ್ಣು ಮಗಳನ್ನು ಮದುವೆ ಮಾಡಿ ಒಂದೊಳ್ಳೆ ಮನೆಗೆ ಸೇರಿಸಿದರೆ ಹೆತ್ತವರ ಕರ್ತವ್ಯವು ಮುಗಿದಂತೆ" ಎಂದು ತಾಯಿ ಕನಕಮ್ಮ ಹೇಳುತ್ತಿದ್ದರೂ ಮನೆಯ ನಿರ್ವಹಣೆಯ ನೆಪ ಹೇಳಿ ತನ್ನ ಜವಾಬ್ದಾರಿಯನ್ನು ಮಗಳಿಗೆ ತಂದೆಯು ವರ್ಗಾಯಿಸುತ್ತಾನೆ. ಈ ಮೂಲಕ ತಮ್ಮ ಜವಾಬ್ದಾರಿಯಿಂದ ನುಣುಚಿಕೊಂಡು ಹೇಗಾದರೂ ಮಾಡಿ ಈ ಮನೆಯ ಹೊಣೆಯನ್ನು ಮಗಳಿಗೆ ವರ್ಗಾಯಿಸಲು ಹವಣಿಸುತ್ತಿರುವ ತಂದೆ ಗೋವಿಂದರಾಯರದು ಅಸಹಾಯಕ ಪರಿಸ್ಥಿತಿ. ಕಿತ್ತು ತಿನ್ನುವ ಬಡತನವನ್ನು ಬೆನ್ನಿಗೆ ಕಟ್ಟಿಕೊಂಡು ಬಂದ ಆ ಕುಟುಂಬವು ಮನೆಯ ಆರು ಸದಸ್ಯರನ್ನು ಸಾಕುವ ಜವಾಬ್ದಾರಿಯನ್ನು ಮಗಳು ಕೋಮಲಾ ಹೊರುತ್ತಾಳೆ. ಮಗ ಗೋಪಾಲಕೃಷ್ಣನ ಶಿಕ್ಷಣ ಮುಗಿದು ತಮ್ಮನ್ನೆಲ್ಲಾ ಸಾಕುತ್ತಾನೆಂಬ ಭರವಸೆಯನ್ನು ಬದುಕು ಅವನ ಅಕಾಲಿಕ ಸಾವಿನೊಂದಿಗೆ ಈಗಾಗಲೇ ಅವನನ್ನು ಕಿತ್ತುಕೊಂಡಿದೆ. ಆದ್ದರಿಂದ ಬಡತನವೇ ಮೂಲ ಸಮಸ್ಯೆಯಾದ್ದರಿಂದ ಸಾಮಾಜಿಕ ಸಂರಚನೆಯಲ್ಲಿ ಅದು ಎದ್ದು ಕಾಣುವ ಸಮಸ್ಯೆಯಾಗಿ ಈ ಕಾದಂಬರಿಯಲ್ಲಿ ಕಾಣಿಸುತ್ತದೆ.

'ಹೆಣ್ಣು ಕಟ್ಟಿದ ಮನೆ' ಕಾದಂಬರಿಯಲ್ಲಿ ತ.ರಾ.ಸು. ರವರು ಬಡತನವನ್ನು ಮತ್ತೊಂದು ರೀತಿಯಲ್ಲಿ ಚಿತ್ರಿಸಿದ್ದಾರೆ. ಇಡೀ ನೆಲಮಂಗಲದಲ್ಲೆ ಗೌರವಾನ್ವಿತ ಕುಟುಂಬವಾಗಿ ವೆಂಕಟರಾಮಾವಧಾನಿಗಳ ಕುಟುಂಬ ಕಾಣಿಸಿಕೊಳ್ಳುತ್ತದೆ. ಮಗ ರಾಮಾವಧಾನಿಗೆ ವ್ಯವಹಾರ ಜ್ಞಾನ ಕೊಂಚ ಕಡಿಮೆ ಇದ್ದಿದ್ದರಿಂದ ಆಸ್ತಿ ಪಾಲು ಮಾಡುವಾಗ ಅವರಿಗೆ ಮೋಸವಾಗುತ್ತದೆ. ಆಗ ರಾಮಾವಧಾನಿ ಹೆಂಡತಿ ನರಸಮ್ಮ ಅವರು ಇಡೀ ಸಂಸಾರವನ್ನು ಬಡತನದಿಂದ ಮೇಲೆತ್ತುವುದು ಮೆಚ್ಚಿಕೊಳ್ಳುವ ವಿಚಾರ. ತನ್ನ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ಇಡೀ ಸಂಸಾರವನ್ನು ಬಡತನದಿಂದ ಪಾರು ಮಾಡುವುದು ಶ್ಲಾಘನೀಯ ವಿಚಾರ. ಸಣ್ಣ ಪುಟ್ಟ ಗಂಟನ್ನೇ ಬೇರೆಯವರಿಗೆ ಸಾಲ ನೀಡಿ ಅದನ್ನು ದೊಡ್ಡ ಗಂಟಾಗಿ ಮಾಡಿ ಮುಂದೆ ಮನೆಯೊಂದನ್ನು ನಿರ್ಮಿಸಿ ಸಮಾಜದಲ್ಲಿ ಇತರರಂತೆ ತಮ್ಮ ಕುಟುಂಬವು ತಲೆ ಎತ್ತಿ ನಿಲ್ಲುವಂತೆ ಮಾಡುವುದು ನರಸಮ್ಮಳ ಹೆಗ್ಗಳಿಕೆ. ಆ ಮೂಲಕ ಬಡತನಕ್ಕೆ ಸೆಡ್ಡು ಹೊಡೆದು ತನ್ನ ಕುಟುಂಬವನ್ನು ಕಾಪಾಡಿಕೊಳ್ಳುವ ಚಿತ್ರಣ ಈ ಕಾದಂಬರಿಯಲ್ಲಿದೆ.

'ಚಂದನದ ಗೊಂಬೆ' ಕಾದಂಬರಿಯಲ್ಲಿ ತ.ರಾ.ಸು. ರವರು ಬಡತನದ ಮೂಲಕ ಒಂದು ಹೆಣ್ಣು ತನ್ನ ಬದುಕನ್ನು ವೈಧವ್ಯದ ಹಿನ್ನೆಲೆಯಲ್ಲಿ ಅನುಭವಿಸುವ ನೋವಿನ ಕರಾಳತೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಸೀತಾರಾಮು ಬಡವನಾದರೆ ಇಡೀ ಸೋಮನಹಳ್ಳಿ ಜನರಿಗೆ ಪ್ರೀತಿಪಾತ್ರನಾದ ವ್ಯಕ್ತಿ. ಬಡವನಾದರೂ ಪ್ರೀತಿಗೆ ಕೊರತೆಯಿಲ್ಲ. ಕಿತ್ತು ತಿನ್ನುವ ಬಡತನದಲ್ಲಿದ್ದ ಲಕ್ಷ್ಮಣರಾಯರ ಕುಟುಂಬವು

ಮದುವೆ ವಯಸ್ಸಿಗೆ ಬಂದ ಮಗಳು ರತ್ನಮ್ಮನಿಗೆ ಒಳ್ಳೆಯ ವರನನ್ನು ಹುಡುಕುವುದೇ ಕಷ್ಟವಾಗಿತ್ತು. ವಿಧಿಯ ವಿಚಿತ್ರ ನಾಟಕದಂತೆ ಸೀತಾರಾಮುವಿಗೆ ರತ್ನಮ್ಮಳ ಜೊತೆ ವಿವಾಹವಾಯಿತು. ಆದರೆ ಸೀತಾರಾಮುವಿನ ಅಕಾಲಿಕ ಮರಣ ರತ್ನಮ್ಮಳ ಬದುಕಲ್ಲಿ ಬಿರುಗಾಳಿಯನ್ನು ಎಬ್ಬಿಸಿತು. ಮುಂದೆ ಬಡತನದ ಕರಾಳತೆಯು ಅವಳ ಜೀವನವನ್ನು ಸುತ್ತಿಕೊಂಡಿತು. ವೈಧವ್ಯವೆಂಬ ನೋವಿನ ಜೊತೆಗೆ ಬಡತನದ ವಿಚಿತ್ರ ಆಟವು ಅವಳ ಬಾಳಲ್ಲಿ ನಡೆದು ಹೋಯಿತು.

'ಮಸಣದ ಹೂವು' ಕಾದಂಬರಿಯಲ್ಲಿ ತ.ರಾ.ಸು. ರವರು ವೇಶ್ಯಾವಾಟಿಕೆಯ ಕರಾಳ ಮುಖವು ಕಂಡುಬಂದರೂ ಇಲ್ಲೂ ಕೆಲವೆಡೆ ಬಡತನದ ಕುರುಹು ಸಿಗುತ್ತದೆ. ರಾಮಯ್ಯನ ಮಗಳು ಪಾರ್ವತಿಗೆ ನಾಗನ ಮೇಲೆ ಪ್ರೀತಿ ಮಾಡಿ ಅದು ಮದುವೆ ರೂಪವನ್ನು ಪಡೆಯಲು ಅಡ್ಡಿಯಾಗಿದ್ದೆ ಈ ಬಡತನ. ಮುಂದೆ ಅದೇ ಜಾಲದಲ್ಲಿ ಸಿಲುಕಿದ ಮತ್ತೊಬ್ಬ ವ್ಯಕ್ತಿ ಚಿನ್ನಮ್ಮ. ಬಡತನವನ್ನು ಸಹಿಸಿಕೊಳ್ಳಲು ಸಾಧ್ಯವಾಗದೆಯೇ ಚಿನ್ನಮ್ಮ ಈ ವೇಶ್ಯಾವಾಟಿಕೆಯ ದಂಧೆಗೆ ಇಳಿದು ತನಗೆ ಇಷ್ಟವಿಲ್ಲದಿದ್ದರೂ ಕುಟುಂಬವನ್ನು ರಕ್ಷಣೆ ಮಾಡಲು ವೇಶ್ಯೆಯಾಗಿ ಜೀವನ ನಡೆಸುವ ಪರಿಸ್ಥಿತಿ ಬರುತ್ತದೆ. ಹಾಗೆಯೇ ಚಿನ್ನಮ್ಮಳ ವೇಶ್ಯಾವಾಟಿಕೆಯ ಅಡ್ಡೆಯಲ್ಲಿದ್ದ ಹಲವರ ಪರಿಸ್ಥಿತಿಯು ಬಡತನದ ಕರಾಳತೆಯನ್ನು ತಡೆದುಕೊಳ್ಳದೇ ಈ ದಂಧೆಗೆ ಬರುವಂತೆ ಮಾಡಿತ್ತು.

ತ.ರಾ.ಸು.ರವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಮತ್ತೊಂದು ಪ್ರಮುಖವಾದ ಸಾಮಾಜಿಕ ಸಮಸ್ಯೆಯೆಂದರೆ ನಿರುದ್ಯೋಗ. 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಕುಟುಂಬ ನಿರ್ವಹಣೆಯ ಜವಾಬ್ದಾರಿಯನ್ನು ತಂದೆ ಗೋವಿಂದರಾಯರು ಮಗಳು ಕೋಮಲಾಳಿಗೆ ವರ್ಗಾಯಿಸುವುದು ನಿರುದ್ಯೋಗ ಸಮಸ್ಯೆಯಿಂದಲೇ. ಗೋವಿಂದರಾಯರಿಗೆ ಆಸ್ತಮಾ ಖಾಯಿಲೆ ಇದ್ದಿದ್ದರಿಂದ ಅದು ಉಲ್ಬಣವಾಗುತ್ತಲೇ ತನ್ನ ಕೆಲಸದ ಮೇಲಿನ ಆಸಕ್ತಿಯು ಕಡಿಮೆಯಾಯಿತು. ಇದೇ ಸಮಯಕ್ಕೆ ಮಗನು ಸತ್ತಿದ್ದರಿಂದ ಬದುಕು ಸಾಗಿಸುವುದೇ ಕಷ್ಟವಾಯಿತು. ತೀವ್ರ ಅನಾರೋಗ್ಯದಲ್ಲಿ ಬಳಲಿದ್ದ ಗೋವಿಂದರಾಯರಿಗೆ ಅವರ ಮೂರು ಸಾವಿರ ಪೆನ್ಷನ್ ಹಣದ ಜೊತೆಗೆ ಇನ್ನೂ ಮುಂದೆ ಕೆಲಸ ಮಾಡಲು ಅಸಮರ್ಥರೆಂದು ಪರೋಕ್ಷವಾಗಿ ಹೇಳಿ ಕೆಲಸದಿಂದ ತೆಗೆದು ಹಾಕಿದರು. ನಂತರ ಗೋವಿಂದರಾಯರು ಬೀದಿ ಬೀದಿಗಳಲ್ಲಿ ಉದ್ಯೋಗಕ್ಕಾಗಿ ಅಲೆದಾಡಿದರು. ಆದರೆ ಇವರ ವಯಸ್ಸನ್ನು ನೋಡಿ ಉದ್ಯೋಗ ನೀಡಲು ಯಾರೂ ಮುಂದೆ ಬರುವುದಿಲ್ಲ. ಇನ್ನು ತನಗೆ ಉದ್ಯೋಗ ದೊರೆಯುವುದಿಲ್ಲವೆಂದು ತಿಳಿದು ತನ್ನ ಅಸಹಾಯಕ ಸ್ಥಿತಿಯನ್ನು ಸಹಿಸಿಕೊಳ್ಳಲು ಸಾಧ್ಯವಾಗದೇ ಸಂಸಾರದ ಜವಾಬ್ದಾರಿಯನ್ನು ಮಗಳಿಗೆ ವರ್ಗಾಯಿಸಲು ನಿರ್ಧರಿಸುವುದು. ಈ ಮೂಲಕ ಜೀವನದ ಬಂಡಿಯನ್ನು ಮುಂದುವರಿಸಲು ಪ್ರಯತ್ನಿಸುತ್ತಾನೆ.

'ಮಸಣದ ಹೂವು' ಕಾದಂಬರಿಯಲ್ಲೂ ಈ ನಿರುದ್ಯೋಗ ಸಮಸ್ಯೆಯು ಕಾಣಿಸಿಕೊಳ್ಳುತ್ತದೆ. ಸಿಂಗಾರುವೇಲು ಸಾಮಿಲ್‌ನಲ್ಲಿ ತನ್ನ ಕೆಲಸವನ್ನು ಮಾಡಕೊಂಡು ಜೀವನ ಸಾಗಿಸಿರುತ್ತಾನೆ. ಕೆಲಸದ

ಜಾಗದಲ್ಲೂ ಕೂಡಾ ತನ್ನ ಪ್ರಾಮಾಣಿಕತೆಗೆ ಹೆಸರಾಗಿರುತ್ತಾನೆ. ಆದರೆ ಒಮ್ಮೆ ಸಾಮಿಲ್‌ನಲ್ಲಿದ್ದ ಹಳೆಯ ಯಂತ್ರಕ್ಕೆ ಅಚಾನಕ್ಕಾಗಿ ತನ್ನ ಎಡಗೈಯನ್ನು ಕೊಟ್ಟು ಅದು ತುಂಡಾಗಿ ಹೋಯಿತು. ನಂತರ ಸಿಂಗಾರುವೇಲುವಿಗೆ ಬದುಕು ನಡೆಸುವುದೇ ಬಹಳ ದುಸ್ತರವಾಯಿತು. ಕೆಲಸ ಕೇಳಿಕೊಂಡು ಓಡಾಡದ ಜಾಗವಿಲ್ಲ. ಎಲ್ಲಾ ಕಡೆ ಕೈಕಳೆದುಕೊಂಡವನಿಗೆ ಕೆಲಸ ನೀಡುವುದಿಲ್ಲವೆಂಬ ಉತ್ತರವನ್ನು ಕೊಟ್ಟರು. ಮುಂದೆ ದಿನದ ಅನ್ನಕ್ಕೂ ಕಷ್ಟವಾಯಿತು. ಆಗ ಬೇರೆ ವಿಧಿಯಿಲ್ಲದೇ ವೇಶ್ಯಾವಾಟಿಕೆ ಅಡ್ಡೆಗೆ ಗಿರಾಕಿಗಳನ್ನು ಹಿಡಿದು ಕೊಡುವ 'ಸಿರ್‌ಪಕಡು' (ತಲೆ ಹಿಡುಕ) ಆಗುತ್ತಾನೆ. ದಿನದ ಕೂಳಿಗಾಗಿ, ನಿರುದ್ಯೋಗಿಯಾಗಿ ಕೂರದೇ ಯಾರು ಏನೇ ಎಂದರೂ ಅದೇ ಕೆಲಸವನ್ನು ಶ್ರದ್ಧೆ, ನಿಷ್ಠೆಯಿಂದ ಮಾಡುತ್ತಾನೆ.

ತ.ರಾ.ಸು. ಕಾದಂಬರಿಗಳಲ್ಲಿ ಕಂಡು ಬರುವ ಮತ್ತೊಂದು ಸಾಮಜಿಕ ಸಮಸ್ಯೆ ಎಂದರೆ ಅದು ಲಿಂಗ ತಾರತಮ್ಯ. ಸಾಮಾಜಿಕವಾಗಿ ಎಲ್ಲಾ ರೀತಿಯಲ್ಲೂ ಗಂಡು ಹೆಣ್ಣು ಸಮನಾದವರು. ಎಲ್ಲಾ ಹಕ್ಕುಗಳಲ್ಲೂ ಇಬ್ಬರಿಗೂ ಸಮಾನ ಪಾಲಿದೆ. ಆದರೆ ಭಾರತದಂಥ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ ಎಂಬ ಭಾವನೆಯಿದೆ. ಅದು ತ.ರಾ.ಸು. ಕಾದಂಬರಿಗಳಲ್ಲೂ ಕಾಣಿಸುತ್ತದೆ. 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಗೋವಿಂದರಾಯರು ಕೆಲಸ ಕಳೆದುಕೊಂಡಿದ್ದಾಗ ಅವರಿಗೆ ಬಂದ ಪೆನ್ಷನ್ ಹಣದಿಂದ ಮಗಳ ಮದುವೆ ಮಾಡಬೇಕೆಂದು ಕನಕಮ್ಮನವರು ಹೇಳಿದಾಗ ಅವಳ ಮಾತಿಗೆ ಯಾವುದೇ ಮನ್ನಣೆ ನೀಡದೇ ಗೋವಿಂದರಾಯರು ಅವಳ ಬಾಯನ್ನು ಮುಚ್ಚಿಸುತ್ತಾನೆ ಹಾಗೂ ತನಗೆ ಕೆಲಸ ಸಿಗುವುದಿಲ್ಲ ಎಂದು ಗೊತ್ತಾದಾಗ ಮಗಳನ್ನು ಕೆಲಸಕ್ಕೆ ಸೇರಿಸಬೇಕೆಂದು ಗೋವಿಂದರಾಯರು ಹವಣಿಸಿದಾಗ ಮದುವೆ ವಯಸ್ಸಿಗೆ ಬಂದ ಮಗಳನ್ನು ಕೆಲಸಕ್ಕೆ ಕಳುಹಿಸಬಾರದೆಂದು ಕನಕಮ್ಮನವರು ಹೇಳಿದಾಗ ಗೋವಿಂದರಾಯರು ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ ಮಗಳು ಕೋಮಲಾಳನ್ನು ಕೆಲಸಕ್ಕೆ ಸೇರಿಸಿಯೇ ಬಿಡುತ್ತಾನೆ.

ಮತ್ತೊಮ್ಮೆ ಕೋಮಲಾಳ ಅಣ್ಣ ಗೋಪಾಲಕೃಷ್ಣನು ತನ್ನ ತಂಗಿಗೆ ಸಂಗೀತಾಭ್ಯಾಸ ಮಾಡಿಸಬೇಕು. ಹೆಚ್ಚಿನ ಶಿಕ್ಷಣ ಕೊಡಿಸಿ ಸಮಾಜದಲ್ಲಿ ಗೌರವಾನ್ವಿತ ಕೆಲಸಕ್ಕೆ ಕೊಂಡೊಯ್ಯಬೇಕೆಂದು ಸಮಾನತೆಯ ಮಂತ್ರ ಸಾರುತ್ತಿದ್ದರೆ ಇತ್ತ ಕನಕಮ್ಮನವರು ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿಗೆ ಒಂದೊಳ್ಳೆ ವರನನ್ನು ಹುಡುಕಿ ಮದುವೆ ಮಾಡಿಕೊಟ್ಟರೆ ಸಾಕು, ವಿದ್ಯಾಭ್ಯಾಸವೆಲ್ಲಾ ಬೇಕಾಗಿಲ್ಲ. ಅದರ ಬದಲಾಗಿ ಮನೆಗೆಲಸಗಳನ್ನು ಚೆನ್ನಾಗಿ ಕಲಿತುಕೊಂಡರೆ ಸಾಕು ಎಂಬ ಧೋರಣೆಯಿದೆ. ಹೆಣ್ಣಿಗೆ ಸಮಾನತೆ ತರಬೇಕೆಂಬ ದೃಷ್ಟಿಯಿಂದ ಗೋಪಾಲಕೃಷ್ಣ ಹೋರಾಡುತ್ತಿದ್ದರೆ ಕನಕಮ್ಮನವರೇ ಅದಕ್ಕೆ ವಿರುದ್ಧವಿರುವುದು ವಿಪರ್ಯಾಸವೇ ಸರಿ.

'ಚಂದನದ ಗೊಂಬೆ' ಕಾದಂಬರಿಯಲ್ಲಿ ಲಿಂಗ ಅಸಮಾನತೆಯ ಧೋರಣೆಯು ಅಷ್ಟೊಂದು ಕಾಣಿಸಿಕೊಳ್ಳದಿದ್ದರೂ ಅಭಿಪ್ರಾಯಗಳನ್ನು ಕೇಳುವ ಸಂದರ್ಭದಲ್ಲಿ ಮನೆಯ ಹೆಣ್ಣು ಮಕ್ಕಳನ್ನು ಗಣನೆಗೆ ತೆಗೆದುಕೊಳ್ಳದಿರುವುದು ಕಂಡು ಬರುತ್ತದೆ. ಲಕ್ಷ್ಮಣರಾಯರು ಮಗಳು ರತ್ನಮ್ಮಳನ್ನು ಸೀತಾರಾಮಯ್ಯನಿಗೆ

ಮದುವೆ ಮಾಡಿಸುವ ವಿಷಯದಲ್ಲಿ ಅವಳ ಅಭಿಪ್ರಾಯವನ್ನು ಕೇಳುವುದೇ ಇಲ್ಲ. ಹಾಗೆಯೇ ತನ್ನ ಹೆಂಡತಿಯ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಹಾಗೆಯೇ ಶ್ರೀನಿವಾಸರಾಯರು ಹೆಂಡತಿ ಸೀತಮ್ಮ ಅವರಲ್ಲಿ ಮನೆಯ ವಿಷಯಗಳಿಗೆ ಸಂಬಂಧಿಸಿದಂತೆ ಯಾವುದೇ ಅನಿಸಿಕೆಯನ್ನು ಕೇಳಲು ಹೋಗುವುದಿಲ್ಲ. ಈ ಕಾದಂಬರಿಯಲ್ಲಿ ಪ್ರತ್ಯಕ್ಷವಾಗಿ ಲಿಂಗ ಅಸಮಾನತೆಯು ಕಾಣಿಸಿಕೊಳ್ಳದಿದ್ದರೂ ಹೆಣ್ಣು ಸಾಮಾಜಿಕ ಸಂರಚನೆಯ ಹಾದಿಯಲ್ಲಿ ತನ್ನದೇ ಆದ ಒಂದು ಬೇಲಿಯನ್ನು ನಿರ್ಮಿಸಿಕೊಂಡಿದ್ದಾಳೆಂಬುದಂತು ಸತ್ಯ.

ತ.ರಾ.ಸು. ರವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಮತ್ತೊಂದು ಪ್ರಮುಖ ವಿಚಾರವೆಂದರೆ ಸ್ವಾಭಿಮಾನ. ಸಾಮಾಜಿಕ ಕಟ್ಟುಪಾಡುಗಳ ಹೆಸರಿನಲ್ಲಿ ಸಮಾಜವು ನಿರ್ಮಿಸಿಕೊಂಡ ಕೆಲವು ಕಟ್ಟಳೆಗಳು ತ.ರಾ.ಸು. ರವರ 'ಪಂಜರದ ಪಕ್ಷಿ' ಮತ್ತು 'ಚಂದನದ ಗೊಂಬೆ' ಕಾದಂಬರಿಗಳಲ್ಲಿ ವಯಸ್ಸಿಗೆ ಬಂದ ಮಗಳಿಗೆ ಮದುವೆ ಮಾಡದಿದ್ದರೆ ಸಮಾಜದಲ್ಲಿ ಮರ್ಯಾದೆ ಹೋಗುತ್ತದೆಂಬ ಕಟ್ಟುಪಾಡು 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಕನಕಮ್ಮನವರು ಬೆಳೆದು ನಿಂತ ಮಗಳು ಕೋಮಲಾಳಿಗೆ ಆದಷ್ಟು ಬೇಗ ಮದುವೆ ಮಾಡಿಸಬೇಕು ಎಂಬುದು ಹಾಗೆಯೇ 'ಚಂದನದ ಗೊಂಬೆ' ಕಾದಂಬರಿಯಲ್ಲಿ ಲಕ್ಷ್ಮಣರಾಯರು ತನ್ನ ಮಗಳು ರತ್ನಳಿಗೆ ಒಳ್ಳೆಯ ವರ ಸಿಕ್ಕಿ ಗಂಡನ ಮನೆಗೆ ಅಡಿಯಿಟ್ಟರೆ ಸಾಕು ಎಂಬುದು ಎರಡು ಕಾದಂಬರಿಗಳಲ್ಲೂ ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿಗೆ ಮದುವೆ ಮಾಡದಿದ್ದರೆ ಸಮಾಜದಲ್ಲಿ ಅವಮಾನಕ್ಕೆ ಒಳಗಾಗುತ್ತೇವೆ ಎಂಬ ಸಾಮಾಜಿಕ ಕಟ್ಟುಪಾಡುಗಳ ಅಡಿಯಲ್ಲಿ ಬದುಕು ನಡೆಸುತ್ತಿದ್ದಾರೆ.

ತ.ರಾ.ಸು. ಕಾದಂಬರಿಗಳಲ್ಲಿ ಅದರಲ್ಲೂ 'ಮಸಣದ ಹೂವು' ಅಲ್ಲಿ ವೇಶ್ಯಾವಾಟಿಕೆಯ ಕರಾಳ ಪರಿಚಯವಾಗಿದೆ. ಸಾಮಾಜಿಕವಾದ ಈ ಅನಿಷ್ಟ ಪದ್ಧತಿಯು ಇಡೀ ಸಮಾಜವನ್ನು ನುಂಗಿ ಹಾಕುತ್ತದೆ. ಅದರ ಅವಗುಣಗಳ ಪರಿಚಯ ಇಂಚಿಂಚು ಇಲ್ಲಿ ಆಗಿದೆ. ಕಾರಣಾಂತರಗಳಿಂದ ಎಷ್ಟೋ ಹೆಣ್ಣು ಮಕ್ಕಳ ಬದುಕು ಈ ಘೋರ ಕೃತ್ಯಕ್ಕೆ ಒಳಗಾಗುವುದರ ಜೊತೆಗೆ ತೀಟೆ ತೀರಿಸಿಕೊಳ್ಳುವ ನೆಪದಲ್ಲಿ ಹಲವು ಪುರುಷರು ಹಾಳಾಗುತ್ತಾರೆ. ಚಿನ್ನಮ್ಮ ತಾನು ದಾರಿ ತಪ್ಪಿದ್ದು ಅಲ್ಲದೇ ಹಲವು ಮುಗ್ಧ ಹೆಣ್ಣು ಮಕ್ಕಳ ಜೀವನದಲ್ಲಿ ಆಟ ಆಡಿ ಈ ಕತ್ತಲ ಕೂಪಕ್ಕೆ ನೂಕುತ್ತಾಳೆ. ಅವರಲ್ಲಿ ಜೀವನದ ಬಗ್ಗೆ ಅದ್ಭುತ ಕನಸುಗಳನ್ನು ಇಟ್ಟುಕೊಂಡಿದ್ದ ಪಾರ್ವತಿಯ ಬದುಕು ಬಲಿಯಾಗುತ್ತದೆ. ಕೈ ಕಳೆದುಕೊಂಡ ಸಿಂಗಾರುವಿಗೆ ವೇಶ್ಯಾವಾಟಿಕೆಯ ಅಡ್ಡೆಯಲ್ಲಿ ಕೆಲಸ ಸಿಕ್ಕರೂ ಸಮಾಜದ ದೃಷ್ಟಿಯಲ್ಲಿ ಅವನು ಕೊನೆವರೆಗೂ 'ಸಿರ್‌ಪಕಡು' (ತಲೆ ಹಿಡುಕ) ವಾಗೇ ಉಳಿಯುತ್ತಾನೆ.

# ಅಧ್ಯಾಯ-5

## ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಕೌಟುಂಬಿಕ ಚಿತ್ರಣ

ತ.ರಾ.ಸು. ಅವರ ಎಲ್ಲಾ ಸಾಮಾಜಿಕ ಕಾದಂಬರಿಗಳಲ್ಲಿ ಕುಟುಂಬ ವ್ಯವಸ್ಥೆಗೆ ತನ್ನದೇ ಆದ ಪ್ರಾಧಾನ್ಯತೆಯನ್ನು ನೀಡಿದ್ದಾರೆ. ಆ ಮೂಲಕ ಭಾರತೀಯ ಕೌಟುಂಬಿಕ ಹಿನ್ನೆಲೆಯಲ್ಲಿ ರೂಪುಗೊಂಡ ಸಾಮಾಜಿಕ ಸಂರಚನೆಯು ಒಂದೇ ದಿಕ್ಕಿನಲ್ಲಿ ಸಾಗದೇ ಅದು ಹಲವು ಕವಲುಗಳಾಗಿ ಒಡೆದು ಕಾದಂಬರಿಯ ಓಘಕ್ಕೆ ನಿರಂತರತೆಯನ್ನು ನೀಡಿದೆ. ಭಾರತೀಯ ಕುಟುಂಬ ವ್ಯವಸ್ಥೆಯನ್ನು ನಾವು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ನೋಡಲು ಸಾಧ್ಯವೇ ಇಲ್ಲ. ಏಕೆಂದರೆ ಸಂಬಂಧಗಳಿಗೆ ಬೆಲೆ ನೀಡುವ, ಅದನ್ನು ತಮ್ಮ ಜೀವಿತಾವಧಿಯ ಕೊನೆಯವರೆಗೂ ಕೊಂಡೊಯ್ಯುವ ವಾತಾವರಣದಲ್ಲಿ ಬೆಳೆದಿರುವ ಭಾರತೀಯರು ನಾಗರೀಕತೆಯ ಓಟದ ಜೊತೆಗೆ ಒಂದು ಕುಟುಂಬ. ಅದರ ಒಳರಚನೆಗಳು, ಅದರ ಗುಣಲಕ್ಷಣಗಳು, ಅಲ್ಲಿನ ಬಂಧ, ಸಂಬಂಧಗಳನ್ನು ನೋಡುವ ರೀತಿ ಇವೆಲ್ಲವೂ ಭಾರತದಂಥ ದೇಶದಲ್ಲಿ ಮಾತ್ರ ಕಾಣಲು ಸಾಧ್ಯ. ಏಕೆಂದರೆ ಸಾಮಾಜಿಕ ಸಂರಚನೆಯ ಮೂಲವೇ ಕುಟುಂಬ ವ್ಯವಸ್ಥೆ. ಇದಾದ ನಂತರವೇ ಮುಂದಿನ ಎಲ್ಲಾ ಸಾಮಾಜಿಕವಾದ ಕೆಲಸ ಕಾರ್ಯಗಳನ್ನು ನೋಡಲು ಸಾಧ್ಯ.

ಭಾರತದ ಕೌಟುಂಬಿಕ ವ್ಯವಸ್ಥೆ ನಿಂತಿರುವುದೇ ಅದರ ಸಂಬಂಧಗಳ ರಚನೆಯ ಮೇಲೆ. ಆ ಸಂಬಂಧಗಳು ಉಳಿದು ಬೆಳೆದು ಸಮಾಜದ ಬೆಳವಣಿಗೆಗೆ ಕಾರಣವಾಗುತ್ತದೆ. ಆ ಸಮಾಜವು ಇಂಥ ಹಲವು ಕೌಟುಂಬಿಕ ರಚನೆಗಳ ಮೇಲೆ ಅವಲಂಬಿತವಾಗಿ ಆ ಮೂಲಕ ಸಾಮಾಜಿಕವಾಗಿ ಸಂಬಂಧಗಳ ಬೆಸೆಯುವಿಕೆ ಸಾಧ್ಯವಾಗುತ್ತದೆ. ಅದರಲ್ಲೂ ಭಾರತೀಯ ಮಧ್ಯಮ ಕುಟುಂಬದಲ್ಲಿ ಕಂಡುಬರುವ ಹಲವು ಏರಿಳಿತಗಳು ಅವುಗಳಿಗೆ ಪರಿಹಾರ ಕ್ರಮಗಳು, ಯಾವುದೇ ಸಂದರ್ಭದಲ್ಲಿಯೂ ಕೌಟುಂಬಿಕ ವ್ಯವಸ್ಥೆಯಲ್ಲಿ ಭಿನ್ನತೆಗಳನ್ನು ತಂದೊಡ್ಡಬಾರದು. ಆ ಭಿನ್ನತೆಯು ಇಡೀ ಕುಟುಂಬವನ್ನು ಒಡೆದು ಹಾಕುವ ಆ ಮೂಲಕ ಕುಟುಂಬ ವ್ಯವಸ್ಥೆಗೆ ಕೊಳ್ಳಿ ಇಡುವ ಸಂಪ್ರದಾಯಕ್ಕೆ ನಾಂದಿ ಹಾಡಬಾರದು.

ಒಂದು ಕುಟುಂಬವೆಂದರೆ ಅಲ್ಲಿ ನೂರಾರು ವರ್ಷಗಳಿಂದ ನಡೆಸಿಕೊಂಡು ಬಂದ ಆಚಾರ-ವಿಚಾರ, ಸಂಸ್ಕೃತಿ, ಸಂಪ್ರದಾಯ, ರೀತಿ-ನೀತಿಗಳು, ಆಹಾರ ಪದ್ಧತಿ ಮುಂತಾದ ಹಲವು ವಿಷಯಗಳು ಬೆಸೆದುಕೊಂಡಿರುತ್ತದೆ. ಏಕೆಂದರೆ ಸಮಾಜದಲ್ಲಿ ಈ ರೀತಿ ಹಲವು ಕುಟುಂಬಗಳು ವಾಸಿಸಿರುತ್ತವೆ. ಅವುಗಳಲ್ಲಿ ಈ ರೀತಿಯ ಅಂಶಗಳು ಸರ್ವೇ ಸಾಮಾನ್ಯ. ಇಂಥ ಪ್ರಮುಖ ಅಂಶಗಳು ಒಂದು ಕೌಟುಂಬಿಕ ವ್ಯವಸ್ಥೆಯ ನೆಲೆಯನ್ನು ಬಹಳ ಗಟ್ಟಿಗೊಳಿಸುತ್ತವೆ. ಆ ಮೂಲಕ ಭಾರತೀಯ ಸಂಸ್ಕೃತಿಯು ನಿಂತಿರುವುದೇ ಕುಟುಂಬ ವ್ಯವಸ್ಥೆಯ ಮೇಲೆ. ಅದರಲ್ಲಿ ಯಾವ ಅನುಮಾನವು ಇಲ್ಲ. ಹನಿ ಹನಿಗೂಡಿದರೆ ಹಳ್ಳ ಎಂಬಂತೆ ಭಿನ್ನ ಸಂಸ್ಕೃತಿ, ಸಂಪ್ರದಾಯ, ಆಚಾರ-ವಿಚಾರ, ರೀತಿ-ನೀತಿ, ಉಡುಗೆ-ತೊಡುಗೆ, ಆಹಾರ ಪದ್ಧತಿ,

ಅನುಸರಿಸುತ್ತಿರುವ ಹಲವು ಸಾಮಾನ್ಯ ಸಂಗತಿಗಳು ಹೀಗೆ ಹಲವು ವಿಚಾರಗಳ ಮೇಲೆ ಭಾರತೀಯ ಸಂಸ್ಕೃತಿಯ ತಳಹದಿಯು ನಿಂತಿರುವುದು. ಈ ಮೂಲಕ ಕುಟುಂಬ ವ್ಯವಸ್ಥೆಯು ಒಂದು ಕಾದಂಬರಿಯ ರಚನೆಯಲ್ಲಿ ಎಷ್ಟು ಬಹುಮುಖ್ಯ ಪಾತ್ರ ವಹಿಸುತ್ತವೆ. ಅದು ಓದುಗರಲ್ಲಿ ಎಂಥ ಪರಿಣಾಮವನ್ನು ಉಂಟು ಮಾಡುತ್ತವೆ ಎಂಬುದನ್ನು ತ.ರಾ.ಸು.ರವರ ಕೆಲವು ಕಾದಂಬರಿಗಳ ಹಿನ್ನೆಲೆಯಲ್ಲಿ ತಿಳಿಯಬೇಕಿದೆ.

ಮೊದಲಿಗೆ ತ.ರಾ.ಸು.ರವರ 'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಕೌಟುಂಬಿಕ ಚಿತ್ರಣವನ್ನು ಗಮನಿಸುವುದಾದರೆ ಇದು ಹೆಸರೇ ಹೇಳುವಂತೆ ಒಂದು ಹೆಣ್ಣು ತನ್ನ ಜೀವನದಲ್ಲಿ ತಾನು ಕಂಡ ಸಂತೋಷವನ್ನು ಅನುಭವಿಸಬೇಕು. ಕೇವಲ ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಬಂಧಿಯಾಗಿಸಿರುವ ತನ್ನನ್ನು ಹೇಗಾದರೂ ಮಾಡಿ ಬಿಡುಗಡೆಗೊಳಿಸಿಕೊಂಡು ಹೊಸ ಜೀವನಕ್ಕೆ ನಾಂದಿ ಹಾಡಬೇಕೆಂದು ಹಪಹಪಿಸುವ, ಆ ಮೂಲಕ ತನ್ನ ಜೀವನದಲ್ಲೂ ಬೇರೆ ಹೆಣ್ಣಿನಂತೆ ಸ್ವಾತಂತ್ರ್ಯವು ಸಿಗಬೇಕೆಂದು ತೊಳಲಾಡುವ ಹೆಣ್ಣಿನ ಪಾತ್ರದಲ್ಲಿ 'ಕೋಮಲಾ'ಳ ಪಾತ್ರವು ತೆರೆದುಕೊಳ್ಳುತ್ತದೆ. ಏಕೆಂದರೆ ಒಂದು ಕೌಟುಂಬಿಕ ವ್ಯವಸ್ಥೆಯಲ್ಲಿ ಆಕೆ ಬಂಧನಕ್ಕೆ ಒಳಗಾಗಿರುತ್ತಾಳೆ. ಆದರೆ ಆ ಬಂಧನಕ್ಕೆ ಮುಕ್ತಿಯಿಲ್ಲ. ನಿತ್ಯ ನಿರಂತರವಾಗಿ ತನ್ನ ಮೇಲೆ ಕೌಟುಂಬಿಕವಾದ ಕಟ್ಟುಪಾಡುಗಳನ್ನು ಹೇರಿ ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ತಂದುಕೊಳ್ಳುತ್ತಾಳೆ ಕೋಮಲಾ.

ಕಾದಂಬರಿಯ ಆರಂಭದಲ್ಲೆ ಈ ಕೌಟುಂಬಿಕ ಚಿತ್ರಣವು ತೆರೆದುಕೊಳ್ಳುತ್ತದೆ. ಕೋಮಲಾ ತನ್ನ ಆಫೀಸಿನಿಂದ ಬಂದ ತಕ್ಷಣವೇ ತನ್ನ ತಂದೆ-ತಾಯಿ ವಾಗ್ವಾದವನ್ನು ಮಾಡುತ್ತಿರುವುದನ್ನು ನೋಡುತ್ತಾಳೆ. ಮತ್ತೊಂದೆಡೆ ತಂಗಿಯಂದಿರು ಕೋಮಲಾ ಮುಂದೆ ಇಡುವ ಬೇಡಿಕೆಗಳು ಸಾಮಾಜಿಕ ಸಂರಚನೆಯ ಹಾದಿಯಲ್ಲಿ ಭಾರತೀಯ ಮಧ್ಯಮ ವರ್ಗದ ಕುಟುಂಬಗಳ ಸಾಮಾನ್ಯವಾದ ಅವಸ್ಥೆಯೇ ಆಗಿವೆ. ಹೀಗೆ ಕೋಮಲಾಳ ತಂಗಿಯಂದಿರು ಬಳೆ, ರಿಬ್ಬನ್, ಸೀಸದ ಕಡ್ಡಿ, ಚಾಕೋಲೆಟ್ ಹೀಗೆ ತಮಗೆ ಇಷ್ಟವಾದ ವಸ್ತುಗಳನ್ನು ತಂದಿರುವಳೇನೋ ಎಂದು ಅಕ್ಕನಲ್ಲಿ ಕೇಳುತ್ತಾರೆ. ಇದು ಸಾಮಾನ್ಯ ಕುಟುಂಬದ ನಿತ್ಯ ನಿರಂತರವಾದ ಕಥೆಯೇ ಆಗಿದೆ. ಆಗ ಕೋಮಲಾಳ ತಾಯಿ ಕನಕಮ್ಮನವರು ಆ ಮಕ್ಕಳಿಗೆ ಬಡಿಯುತ್ತಾ ಕೆಲಸ ಮಾಡಿ ದಣಿದು ಬಂದ ಮಗಳಿಗೆ ತೊಂದರೆ ಕೊಡಬೇಡಿ ಎಂದು ಮಕ್ಕಳನ್ನು ಗದರಿಸಿ ಓಡಿಸುತ್ತಾಳೆ. ಹಾಗೆಯೇ ತಮ್ಮ ವಿಶ್ವನಾಥನು ತನ್ನ ಅಕ್ಕನ ಬಳಿ ಕಥೆ ಕೇಳಲು ಬಂದಾಗ ಕೋಮಲಾ ಹೇಳುವ ಕಥೆಯೇ ಸ್ವಾರಸ್ಯವಾಗಿ ಕಾಣಿಸುತ್ತದೆ. ಏಕೆಂದರೆ ಸೂಚ್ಯವಾಗಿ ತನ್ನ ಬಾಳಿನ ಕಥೆಯನ್ನೆ ತಮ್ಮನಿಗೆ ಹೇಳುತ್ತಾಳೆ. ಆದರೆ ರಾಜ-ಮಹಾರಾಜರ ಕಥೆಯಲ್ಲಿ ಆಸಕ್ತಿಯಿದ್ದ ತಮ್ಮ ವಿಶ್ವನಾಥನು ಈ ಕಥೆಯನ್ನು ಕೇಳಲು ನಿರಾಕರಿಸುತ್ತಾನೆ.

ಕೋಮಲಾಳ ಬಯಕೆಯ ಕಟ್ಟೆ ಒಡೆದು ಅದು ಕಣ್ಣೀರಾಗಿ ಧಾರಾಕಾರವಾಗಿ ಹರಿಯುತ್ತದೆ. ಮನೆಯಲ್ಲಿ ತಾನೊಬ್ಬಳೇ ದುಡಿಯುವವಳಿದ್ದು, ಐದು ಜನರ ಒಂದು ಸಂಸಾರವನ್ನು ಸಾಕುವುದು ಎಷ್ಟು ಕಷ್ಟವಾಗಿತ್ತೆಂದೂ ಆಕೆಗೆ ತುಂಬಾ ಚೆನ್ನಾಗಿ ತಿಳಿದಿತ್ತು. ತನ್ನ ಮನದಲ್ಲಿ ಹಲವು ಆಸೆ-ಆಕಾಂಕ್ಷೆಗಳಿದ್ದರೂ ಅದನ್ನು ಕೌಟುಂಬಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅದುಮಿಟ್ಟುಕೊಂಡು ತನ್ನ ತಂದೆ-ತಾಯಿಗಳ ಬದುಕಿಗೆ

ಊರುಗೋಲಾಗಿ ನಿಲ್ಲುತ್ತಾಳೆ. ಒಂದು ಹೆಣ್ಣು ತಾನು ಮನಸ್ಸು ಮಾಡಿದರೆ ಏನೆಲ್ಲಾ ಮಾಡಬಹುದು ಎಂಬುದಕ್ಕೆ ಕೋಮಲಾಳ ಪಾತ್ರವೇ ಒಂದು ಸಾಕ್ಷಿ. ತನ್ನ ಸಂಸಾರವನ್ನು ಬೀದಿ ಪಾಲು ಮಾಡಬಾರದೆಂದು ಪಣ ತೊಟ್ಟ ಕೋಮಲಾ ಜೀವನದಲ್ಲಿ ಪಡಬೇಕೆಂದಿದ್ದ ಅದಮ್ಯ ಬಯಕೆಗಳ ಸರಮಾಲೆಯನ್ನು ದೂರ ಸರಿಸಿ ಕುಟುಂಬದ ಈಗಿನ ನಿಜಸ್ಥಿತಿಯನ್ನು ಅರಿತು, ಸಮಾಜದಲ್ಲಿ ಯಾರು ಏನೇ ಮಾತನ್ನು ತನ್ನ ಮದುವೆಯನ್ನು ಕುರಿತು ಆಡಿದರೂ ತನ್ನ ಕುಟುಂಬದ ಸಂತೋಷದ ಮುಂದೆ ಅವಳ ಬಯಕೆಗಳು ಯಕಃಶ್ಚಿತ್ ಆಗಿ ಕಾಣಿಸಿದವು.

ಕೋಮಲಾಳು ತನ್ನ ಬದುಕಿನ ಹಲವು ಆಸೆಗಳನ್ನು ಕೃಷ್ಣ–ರುಕ್ಮಿಣಿಯ ಬಗೆಗಿರುವ ಹಾಡುಗಳನ್ನು ಹಾಡುವುದರ ಮೂಲಕ ಈಡೇರಿಸಿಕೊಳ್ಳುವಳು. ಬದುಕಿನ ಸೂರೇ ತನ್ನ ಪಾಲಿಗೆ ಮುರಿದು ಹೋಗಿರುವಾಗ ತಾನು ಯಾರ ಬಳಿ ಏನೇ ಮೊರೆಯಿಟ್ಟರೂ ಅದರಿಂದ ಯಾವುದೇ ಪ್ರಯೋಜನವಿಲ್ಲ ಎಂದು ಆಕೆಗೆ ಚೆನ್ನಾಗಿಯೇ ತಿಳಿದಿತ್ತು. ತನ್ನ ಬದುಕು ಕೇವಲ ಮನೆಯಿಂದ ಕಛೇರಿಗೆ, ಕಛೇರಿಯಿಂದ ಮನೆಗೆ ನಡೆದು ಬದುಕಿನ ಬಂಡಿಯನ್ನು ನಡೆಸುವಂತಾಯಿತೇ ಹೊರತು, ಇತರೆ ಹೆಣ್ಣು ಮಕ್ಕಳಂತೆ ತನ್ನ ಮನದ ಬಯಕೆ ಏನೇ ಇದ್ದರೂ ಆ ಪ್ರಕಾರ ಏನೂ ನಡೆಯುವುದಿಲ್ಲ ಎಂದೆನಿಸಿತು. ಗಂಡ–ಮನೆ–ಮಕ್ಕಳು ಇವೆಲ್ಲವೂ ಕೇವಲ ತನ್ನ ಪಾಲಿಗೆ ಕನಕಸಿನ ಭ್ರಮಾಲೋಕವೇ ಹೊರತು ನಿಜಜೀವನದಲ್ಲಿ, ಅದೂ ತನ್ನ ಬಾಳಲ್ಲಿ ಅಂತಹ ಸಂಭ್ರಮವಾದ ಘಳಿಗೆಗೆ ಅವಕಾಶವೇ ಇಲ್ಲವೆನಿಸಿತು.

ಮತ್ತೊಂದೆಡೆ ಕೋಮಲಾಳ ತಾಯಿ ಕನಕಮ್ಮನವರು ಅಡಿಗೆ ಮನೆಯಲ್ಲಿದ್ದುಕೊಂಡೇ ತನ್ನ ಮಗಳ ಸ್ಥಿತಿಗೆ ಮರುಕ ತೋರಿಸುತ್ತಾಳೆ. ಆದರೆ ಕನಕಮ್ಮನು ಅಸಹಾಯಕಳಾಗಿರುವುದರಿಂದ ಏನೂ ಮಾಡದ ಪರಿಸ್ಥಿತಿಯಲ್ಲಿ ಅವಳಿದ್ದಾಳೆ. ಈ ಹಿಂದೆ ಹೆಣ್ಣು ಮಕ್ಕಳು ಕೇವಲ ಅಡುಗೆ ಮನೆಯ ಚಾಕರಿ ಮಾಡಿಕೊಂಡಿರಬೇಕು, ಮನೆಗೆಲಸಗಳನ್ನು ತುಂಬಾ ಚೆನ್ನಾಗಿ ಅರಿತುಕೊಂಡು ಗಂಡನ ಮನೆಗೆ ಸೇರಿ ಸುಖಸಂಸಾರವನ್ನು ಮಾಡಿಕೊಂಡಿರಬೇಕು ಎಂದು ಹೇಳುತ್ತಿದ್ದ ಕನಕಮ್ಮನವರು ಬದಲಾದ ಪರಿಸ್ಥಿತಿಯಲ್ಲಿ ತನ್ನ ಮಗಳೆ ಇಡೀ ಕುಟುಂಬವನ್ನು ಸಾಕಬೇಕಾಗಿ ಬಂದಾಗ ತನ್ನ ಅಭಿಪ್ರಾಯವನ್ನು ಬದಲಿಸಿಕೊಂಡು ತನ್ನ ಮಗಳ ಕೆಲಸ ಕಾರ್ಯಗಳಿಗೆ ಒತ್ತಾಸೆಯಾಗಿ ಇದ್ದಾಳೆ.

ಮಗ ಗೋಪಾಲಕೃಷ್ಣ ಬದುಕಿದ್ದಾಗ ತಾನು ಶಿಕ್ಷಣವನ್ನು ಪಡೆದು ಡಿಗ್ರಿ ಗಳಿಸಿ ಉನ್ನತ ಹುದ್ದೆಗೆ ಹೋಗಿ ಬಡತನದಲ್ಲಿ ಬಳಲಿ ಬೆಂಡಾಗಿದ್ದ ಕುಟುಂಬಕ್ಕೆ ಆಸರೆಯಾಗಿ ನಿಲ್ಲುವನೆಂಬ ಆಸೆಯು ಕಮರಿ ಹೋಗಿತ್ತು. ತನ್ನ ತಾಯಿಯನ್ನು ಮಹಾರಾಣಿಯಾಗಿ ನೋಡಿಕೊಂಡು, ಕೈಗೊಬ್ಬರು ಕಾಲಿಗೊಬ್ಬರು ಆಳುಗಳನ್ನು ಇಟ್ಟು ಇಡೀ ಮನೆಯ ವಾತಾವರಣವನ್ನೇ ಬದಲಾಯಿಸುತ್ತೇನೆ ಎಂದವನು ಈಗ ಕಾಣದ ಲೋಕಕ್ಕೆ ಹೋಗಿ ತಮ್ಮ ಆಸೆಗೆಲ್ಲಾ ತಣ್ಣೀರೆರಚಿ ಹೋಗಿದ್ದಾನೆ. ತನ್ನ ತಂಗಿಯನ್ನು ಹೆಚ್ಚು ಓದಿಸಿ, ಸಂಗೀತ ಸಾಮ್ರಾಜ್ಞೆ ಮಾಡಿ ಅವಳಿಗೆ ಒಂದು ಉತ್ತಮ ಭವಿಷ್ಯವನ್ನು ಕಟ್ಟಿಕೊಡುತ್ತೇನೆ ಎಂದು ಹೇಳಿದವನು ಇಂದು

ಮರೆಯಾಗಿ ಹೋಗಿ ಮನೆಯವರೆಲ್ಲರ ಬಾಳಿನಲ್ಲಿ ಅಂಧಕಾರ ಮೂಡಿಸಿದ್ದಾನೆ. ಬಡತನವೆಂಬ ಮಹಾಮಾರಿ ತಮ್ಮ ಮನೆಯ ಬಾಗಿಲಲ್ಲಿ ಕುಳಿತು ಕೇಕೆ ಹಾಕಿ ನಗುತ್ತಿದೆ. ಹೀಗಿರುವಾಗ ಕೋಮಲೆ ತನ್ನ ಬದುಕಿನ ಆಶಾಕಿರಣವನ್ನು ಬಯಸುವುದು ಯಾವ ರೀತಿಯಲ್ಲಿ ನ್ಯಾಯವೋ? ತಿಳಿಯುತ್ತಿಲ್ಲ.

ಒಬ್ಬ ಅಣ್ಣನಾಗಿ ಗೋಪಾಲಕೃಷ್ಣ ತನ್ನ ತಂಗಿ ಕೋಮಲೆಗೆ ಹೆಚ್ಚು ವಿದ್ಯಾಭ್ಯಾಸ ಕೊಡಿಸಿ ಸಮಾಜದಲ್ಲಿ ಆಕೆಯನ್ನು ಒಂದು ಉನ್ನತ ಸ್ಥಾನದಲ್ಲಿ ನೋಡಬೇಕೆಂದುಕೊಂಡಿದ್ದಾನೆ. ಮಡಿವಂತಿಕೆಯ ಸಮಾಜದಲ್ಲಿ, ಹೆಣ್ಣಿಗೆ ಸಾಮಾಜಿಕ ಕಟ್ಟುಕಟ್ಟಳೆಗಳ ಮೂಲಕ ಬಂಧಿಯಾಗಿಸಿರುವ ಈ ಸಂಪ್ರದಾಯದ ವಿರುದ್ಧ ಸೆಟೆದು ನಿಂತು ಲಿಂಗ ತಾರತಮ್ಯದಂಥ ಪೆಡಂಭೂತವನ್ನು ಬೇರುಸಹಿತ ಕೀಳಬೇಕು. ಆ ಮೂಲಕ ಎಲ್ಲಾ ರಂಗದಲ್ಲೂ ಹೆಣ್ಣು ಗಂಡು ಇಬ್ಬರಿಗೂ ಸಮಾನ ಅವಕಾಶಗಳು ಸಿಗಬೇಕು. ಅದು ತನ್ನ ತಂಗಿಯ ಮೂಲಕವೇ ಆರಂಭಗೊಳ್ಳಬೇಕೆಂಬುದು ಗೋಪಿಟ್ಟಿಯ ಆಸೆಯಾಗಿದೆ.

ಗೋಪಾಲಕೃಷ್ಣ ಬದುಕಿದ್ದಾಗ ಮನೆಗೊಂದು ಆಶಾಕಿರಣವಾಗಿದ್ದ. ಭವಿಷ್ಯದಲ್ಲಿ ತಮ್ಮ ಬದುಕಿಗೆ ಊರುಗೋಲಾಗಿ ಮಗ ನಿಲ್ಲಬಹುದೆಂಬ ಆಸೆಯೆಲ್ಲವೂ ಒಂದು ಕನಸಿನಂತೆ ಮುಗಿದು ಹೋಯಿತು. ಬದುಕಿನ ಬಂಡಿಯನ್ನು ಕಡುಬಡತನದಲ್ಲೇ ಎಳೆಯುತ್ತಿದ್ದ ಗೋವಿಂದರಾಯ-ಕನಕಮ್ಮ ದಂಪತಿಗಳಿಗೆ ಮಗ ಗೋಪಿಟ್ಟಿಯು ಮಳೆ ಮುಗಿದ ಮೇಲೆ ಮೂಡುವ ಕಾಮನಬಿಲ್ಲಿನಂತೆ ಕಂಗೊಳಿಸುತ್ತಿದ್ದ. ಈ ಮೂಲಕ ಬದುಕಿನ ಕಷ್ಟಗಳೆಲ್ಲವೂ ಮಗನು ಬೆಳೆದು ದೊಡ್ಡವನಾದರೆ ಕಳೆದು ಹೋಗುವುದೆಂಬ ನಿರೀಕ್ಷೆಯಲ್ಲಿ ಅವರಿದ್ದರು. ಅದು ಕೊನೆಗೆ ಹುಸಿಯಾಯಿತು. ಬದುಕಿಗೆ ಆಸರೆಯಾಗಬೇಕಿದ್ದ ಮಗನು ಪರೀಕ್ಷೆಯ ಇಂಟರ್‌ವ್ಯೂ ಮುಗಿಸಿ ಕನ್ಯಾಕುಮಾರಿ ನದಿಯಲ್ಲಿ ಈಜಲು ಹೋಗಿ ಮುಳುಗಿ ಸತ್ತನು. ಈ ಮೂಲಕ ಬದುಕಿನಲ್ಲಿದ್ದ ಒಂದಷ್ಟು ಆಸೆಯು ಕಮರಿ ಹೋಯಿತು.

ಬಡತನದಲ್ಲೆ ಬಳಲಿ ಬೆಂಡಾಗಿದ್ದ ಗೋವಿಂದರಾಯರಿಗೆ ಆಸ್ತಮಾ ಬಂದು ಅವರು ಇಪ್ಪತ್ತಾರು ವರ್ಷಗಳಿಂದ ನಿಯತ್ತಿನಿಂದ ದುಡಿಯುತ್ತಿದ್ದ ಕಂಪನಿಯು 'ನೀವು ಕೆಲಸ ಮಾಡಲು ಲಾಯಕ್ಕಿಲ್ಲ' ಎಂದು ಹೇಳಿ ಮೂರು ಸಾವಿರ ಪೆನ್ಷನ್ ಹಣವನ್ನು ನೀಡಿ ಕಳುಹಿಸಿತು. ಈಗ ಗೋವಿಂದರಾಯರಿಗೆ ದಿಕ್ಕೆ ತೋಚದಂತಾಯಿತು. ಆದರೆ ಆ ಹಣದಲ್ಲಿ ತಮ್ಮ ಮಗಳು ಕೋಮಲೆಯ ಮದುವೆ ಮಾಡಿ ಆಡುವವರ ಬಾಯಿಗೆ ಆಹಾರವಾಗಬಾರದೆಂದು ಕನಕಮ್ಮ ಯೋಚಿಸುತ್ತಿದ್ದರು. ಆದರೆ ಆ ಹಣವನ್ನು ಮದುವೆಗೆಂದು ಖರ್ಚು ಮಾಡಿದರೆ ಭವಿಷ್ಯದಲ್ಲಿ ಅನ್ನದ ಬದಲು ಮಣ್ಣು ತಿನ್ನಬೇಕಾಗುತ್ತದೆಂದು ಗೋವಿಂದರಾಯರು ತಮ್ಮ ಮಗಳ ಮದುವೆ ವಿಷಯಕ್ಕೆ ಮಂಗಳ ಹಾಡಿದರು.

ಮಗ ಗೋಪಿಟ್ಟಿಯ ಸಾವಿನ ನಂತರ ವಂಶೋದ್ಧಾರಕನು, ವಂಶವನ್ನು ಬೆಳಗಲು ಒಂದು ಗಂಡು ಮಗು ಬೇಕೆಂದು ಗೋವಿಂದರಾಯರು ಕನಕಮ್ಮನ ಬಳಿ ಇದರ ಬಗ್ಗೆ ಪ್ರಸ್ತಾಪಿಸಿ ಒಬ್ಬರ ತೋಳಲ್ಲಿ

ಮತ್ತೊಬ್ಬರು ಬಂಧಿಯಾದರು. ಇಲ್ಲಿ ಗಂಡು ಮಗುವಿನ ವ್ಯಾಮೋಹ ಒಂದೆಡೆಯಾದರೆ ಅವರ ಕಾಮದಾಹವನ್ನು ತೀರಿಸಿಕೊಳ್ಳುವ ಹಂಬಲ ಮತ್ತೊಂದೆಡೆ. ಹಾಗೆಯೇ ಮದುವೆ ವಯಸ್ಸಿಗೆ ಮಗಳು ಬೆಳೆದು ನಿಂತಿದ್ದರೂ ಗೋವಿಂದರಾಯ – ಕನಕಮ್ಮ ದಂಪತಿಗಳಿಗೆ ತಮ್ಮ ಬಯಕೆಗಳೇ ದೊಡ್ಡದಾಗಿದ್ದವು.

ಹಾಗೆಯೇ ತಾನು ದುಡಿಯಲು ಯೋಗ್ಯನಲ್ಲವೆಂದು ಹಲವು ಮಾಲೀಕರು ಗೋವಿಂದರಾಯರಿಗೆ ಸರ್ಟಿಫಿಕೇಟ್ ಕೊಟ್ಟಾಗ ಕುಟುಂಬ ಜವಾಬ್ದಾರಿಯನ್ನು ಮಗಳು ಕೋಮಲೆಯ ತಲೆಯ ಮೇಲೆ ಕಟ್ಟಲು ಗೋವಿಂದರಾಯರು ಪ್ರಯತ್ನಿಸುತ್ತಾರೆ. ಅದಕ್ಕಾಗಿ ಹೆಣ್ಣು ಹೊರಗೆ ಹೋಗಿ ದುಡಿಯಬಾರದು ಎಂಬ ಸಾಮಾಜಿಕ ನಿರ್ಬಂಧವನ್ನೆಲ್ಲಾ ಗಾಳಿಗೆ ತೂರಿ, ಯಾರು ಏನೇ ಅಂದುಕೊಂಡರೂ ಅದರಿಂದ ತನ್ನ ಕುಟುಂಬದ ನಿರ್ವಹಣೆ ಸಾಧ್ಯವಿಲ್ಲವೆಂದು ಅರಿತ ಗೋವಿಂದರಾಯರು ಮಗಳನ್ನು ಕೆಲಸಕ್ಕೆ ಸೇರಿಸಿಯೇ ಬಿಟ್ಟರು.

ಒಟ್ಟಾರೆ 'ಪಂಜರದ ಪಕ್ಷಿ' ಕಾದಂಬರಿಯು ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಬಡತನದ ಕತ್ತಲ ಕೂಪದಲ್ಲಿ ನರಳುತ್ತಿರುವ ಕುಟುಂಬವನ್ನು ರಕ್ಷಿಸಲು ಗಂಡು–ಹೆಣ್ಣೆಂಬ ತಾರತಮ್ಯ ಯಾವುದೂ ಇಲ್ಲ. ಕುಟುಂಬ ಜವಾಬ್ದಾರಿ ಎಂದು ಬಂದಾಗ ಹೆಣ್ಣೇ ಗಂಡಾಗಿ ಈ ಕುಟುಂಬವನ್ನು ಹೇಗೆ ಸಾಕಿ ಸಲುಹುತ್ತಾಳೆ. ಆ ಮೂಲಕ ಕೌಟುಂಬಿಕ ವ್ಯವಸ್ಥೆಗೆ ಮಾದರಿಯಾಗಿದ್ದಾಳೆ ಎಂಬುದೇ ಇಲ್ಲಿನ ಆಶಯ.

'ಒಂದು ಗಂಡಿನ ಯಶಸ್ಸಿನ ಹಿಂದೆ ಒಬ್ಬ ಹೆಣ್ಣಿರುತ್ತಾಳೆ' ಎಂಬ ಮಾತು ತ.ರಾ.ಸು. ಅವರ 'ಹೆಣ್ಣು ಕಟ್ಟಿದ ಮನೆ' ಎಂಬ ಕಾದಂಬರಿಯಲ್ಲಿ ಅಕ್ಷರಶಃ ಅದನ್ನು ನಿರೂಪಿಸಿದ್ದಾರೆ. ಒಂದು ಹೆಣ್ಣು ಮನಸ್ಸು ಮಾಡಿದರೆ ಒಬ್ಬ ಗಂಡಿನ ಜೀವನದಲ್ಲಿ ಗೌರಿಯಾಗುತ್ತಾಳೆ, ಮಾದರಿಯು ಆಗುತ್ತಾಳೆ. ಆದ್ದರಿಂದ ತ.ರಾ.ಸು. ಈ ಕಾದಂಬರಿಯ ಮೂಲಕ ಸಾಮಾಜಿಕ ಸಂರಚನೆಯಲ್ಲಿ ಕುಟುಂಬ ವ್ಯವಸ್ಥೆ ಎಷ್ಟು ಮುಖ್ಯ, ಅಲ್ಲಿ ಹೆಣ್ಣು ಆ ಮನೆಯ ಉದ್ಧಾರಕ್ಕೆ ಏನೆಲ್ಲಾ ಪಾತ್ರ ನಿರ್ವಹಿಸುತ್ತಾಳೆ ಎಂಬುದನ್ನು ಭಾರತೀಯ ಮಧ್ಯಮ ವರ್ಗದ ಕುಟುಂಬದಲ್ಲಿ ನಡೆಯುವ ಹಲವು ಸನ್ನಿವೇಶಗಳ ಮೂಲಕ ನಿರೂಪಿಸಿದ್ದಾರೆ.

ನರಸಮ್ಮ ಒಬ್ಬ ಬಡ ಕುಟುಂಬದ ಹೆಣ್ಣು ಮಗಳು. ಮುಂದೆ ತನ್ನ ಸಂಸಾರವನ್ನು ಕಾಪಾಡಲು ಏನೆಲ್ಲಾ ಪಡಿಪಾಟಲು ಪಡುತ್ತಾಳೆ. ಅವಳ ನಿರಂತರವಾದ ಪ್ರಯತ್ನದಿಂದ ಮುರಿದು ಬೀಳುತ್ತಿದ್ದ ಒಂದು ಸಂಸಾರಕ್ಕೆ ಹೇಗೆ ಊರುಗೋಲಾಗಿ ನಿಂತು ಇಡೀ ಕುಟುಂಬದ ಜವಾಬ್ದಾರಿಯನ್ನು ತನ್ನ ಸುಪರ್ದಿಗೆ ತೆಗೆದುಕೊಂಡು ತನ್ನ ಕುಟುಂಬವು ಸಮಾಜದಲ್ಲಿ ಒಂದು ಉತ್ತಮ ಪರಿಸ್ಥಿತಿಗೆ ಬರಬೇಕು. ಸಾಮಾಜಿಕವಾಗಿ ಎಷ್ಟೇ ಕಷ್ಟಪಟ್ಟರೂ ಭವಿಷ್ಯವು ಉಜ್ವಲವಾಗಿರಬೇಕೆಂದು ಹವಣಿಸಿ ತನ್ನ ಸಂಸಾರಕ್ಕೆ ಇಡೀ ಜೀವನವನ್ನು ತೇಯ್ದು, ಊಟ, ನಿದ್ರೆ ಎಲ್ಲವನ್ನೂ ದೂರ ಸರಿಸಿ ಹಗಲಿರುಳೆನ್ನದೆ ತನ್ನ ಸಂಸಾರದ ನೊಗ ಹೊತ್ತ ಕಾಮಧೇನುವಾಗಿ ಕಾಣಿಸಿಕೊಳ್ಳುತ್ತಾಳೆ ನರಸಮ್ಮ.

ನರಸಮ್ಮನಿಗೆ ರಾಮಾವಧಾನಿಗಳ ಜೊತೆ ಮದುವೆಯಾಗಿ ನೆಲಮಂಗಲಕ್ಕೆ ಬಂದ ನಂತರ ತನ್ನ ಸಂಸಾರದ ಪೂರ್ಣ ಜವಾಬ್ಧಾರಿಯನ್ನು ತಾನೇ ವಹಿಸಿಕೊಳ್ಳುತ್ತಾಳೆ. ತನ್ನ ಮಾವನವರಾದ ವೆಂಕಟರಾಮಾವಧಾನಿಗಳು ಹೇಳಿದಂತೆ ತನ್ನ ಪತಿರಾಯರು ವ್ಯವಹಾರದ ವಿಷಯದಲ್ಲಿ ಸ್ವಲ್ಪ ಮೂಢರು ಎಂದು ತಿಳಿದಾದ ಮೇಲಂತೂ ಒಂದೊಂದು ಪೈಸೆಯನ್ನು ಕೂಡಿಡುತ್ತಾ ತಾವು ಸಮಾಜದಲ್ಲಿ ಇತರರಂತೆ ತಲೆ ಎತ್ತಿ ನಡೆಯಬೇಕು. ಯಾರ ಮುಂದೆಯೂ ಕೈ ಚಾಚಿ ಏನನ್ನೂ ಕೇಳಬಾರದು ಎಂಬ ನಿಲುವಿನಲ್ಲಿದ್ದ ನರಸಮ್ಮ ಆ ಸಂಸಾರವನ್ನು ಒಬ್ಬ ಸ್ವಾಭಿಮಾನಿ ಹೆಣ್ಣಾಗಿ ಯಾರಿಗೂ ಕಡಿಮೆ ಇಲ್ಲದೇ ತನ್ನ ಕುಟುಂಬವು ಬೆಳೆಯಬೇಕೆಂದು ಪಣ ತೊಟ್ಟಳು.

ನರಸಮ್ಮನಿಗೆ ಜಮೀನಿನಿಂದ ಅಲ್ಪಸ್ವಲ್ಪ ಆದಾಯ ಬರುತ್ತಿತ್ತು, ಗಂಡನ ಪೌರೋಹಿತ್ಯದಿಂದ ಅಷ್ಟೋ ಇಷ್ಟೋ ಪುಡಿಗಾಸು ಬರುತ್ತಿತ್ತು. ಆದರೆ ಸಂಸಾರದಲ್ಲಿ ಇವರಿಬ್ಬರಲ್ಲದೇ ಒಂದರ ಹಿಂದೊಂದರಂತೆ ಎರಡು ಮಕ್ಕಳ ಜನನವಾಯಿತು. ಶ್ರೀನಿವಾಸ, ಪದ್ಮಾವತಿ ಎಂಬ ಆ ಎರಡು ಮಕ್ಕಳ ನಿರ್ವಹಣೆಯು ತನ್ನ ಸಂಸಾರದ ಒಂದು ಭಾಗವಾದ್ದರಿಂದ ಕುಟುಂಬದಲ್ಲಿ ಖರ್ಚು ವೆಚ್ಚಗಳು ಹೆಚ್ಚಾದವು.

ಮೊದಲೇ ಸಂಸಾರ ನಿರ್ವಹಣೆಯಲ್ಲಿ ತುಂಬಾ ಜಾಣೆಯಾಗಿದ್ದ ನರಸಮ್ಮ ಎರಡು ಮಕ್ಕಳ ತಾಯಿ ಆದ ಮೇಲಂತೂ ಇನ್ನೂ ಹುಷಾರಾದಳು. ಇದ್ದ ಬದ್ದ ಸಣ್ಣ ಪುಟ್ಟ ಗಂಟನ್ನೇ ದೊಡ್ಡದು ಮಾಡುತ್ತಾ, ಮುಂದೆ ಚಿಕ್ಕ ಪುಟ್ಟ ಸಾಲವಾಗಿ ಕೊಟ್ಟು, ದೇವರ ಪುಣ್ಯದಿಂದ ಸ್ವಲ್ಪ ಬಂಡವಾಳ ಮಾಡಿಕೊಂಡಳು. ಈ ಮೂಲಕ ಹೆಣ್ಣು ತನ್ನ ಸಂಸಾರವನ್ನು ಕಾಪಾಡಿಕೊಳ್ಳಲು ತನ್ನ ಸಂಸಾರದಲ್ಲಿ ಯಾವುದೇ ಕೊರತೆಯೂ ಕಾಣದಂತೆ, ಬದುಕಿನ ತೇರನ್ನು ಎಳೆಯುತ್ತಾ ಮುಂದೆ ಬರುವ ತನ್ನ ಮಕ್ಕಳಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುತ್ತಾರೆ.

ನರಸಮ್ಮ ಹಣಕಾಸಿನಲ್ಲಿ ಸ್ವಲ್ಪ ಮುಂದುವರಿಯುತ್ತಾ ತನ್ನ ಮಕ್ಕಳಿಗೂ ಒಂದು ನೆಲೆ ನೀಡಲು ನಿರ್ಧರಿಸಿದಳು. ಮಗ ಶ್ರೀನಿವಾಸನನ್ನು ಲೋವರಿ ಸೆಕೆಂಡರಿಯವರೆಗೂ ಓದಿಸಿ ಅಮಲ್ದಾರರ ಕೈಕಾಲು ಹಿಡಿದು ತಾಲ್ಲೂಕು ಕಛೇರಿಯಲ್ಲಿ ಗುಮಾಸ್ತ ಕೆಲಸವನ್ನು ಕೊಡಿಸಿದಳು. ಮುಂದೆ ಊರ ಮಂದಿಯೇ ಆಶ್ಚರ್ಯಗೊಳ್ಳುವಂತೆ ಒಬ್ಬ ಬಡಹುಡುಗಿ 'ವೆಂಕಮ್ಮ'ನನ್ನು ತನ್ನ ಮಗ ಶ್ರೀನಿವಾಸನಿಗೆ ತಂದು ಮದುವೆ ಮಾಡಿಸುತ್ತಾಳೆ. ತನ್ನ ಸೊಸೆಗೆ ಅವಳೊಪ್ಪಿದ ಸೀರೆ, ಒಡವೆಗಳನ್ನು ಕೊಡಿಸಿ ಅವಳ ಅಂದ ಚೆಂದ ನೋಡಿದ ನರಸಮ್ಮ ತನ್ನ ಜೀವನದಲ್ಲಿ ಎಂದೂ ಒಂದು ಒಳ್ಳೆಯ ಸೀರೆ, ಒಡವೆಗಳನ್ನು ತೊಟ್ಟವಳಲ್ಲ. ನರಸಮ್ಮನ ಜೀವನದ ಆಸೆಯೇ ತನ್ನ ಸಂಸಾರವು ಉತ್ತಮವಾಗಿರಬೇಕೆಂಬುದು. ಈ ಬಗ್ಗೆ ಮಗ ಶ್ರೀನಿವಾಸವಧಾನಿಯು ತಾಯಿಗೆ ಒಡವೆ, ಸೀರೆಯನ್ನು ತೊಟ್ಟುಕೊಳ್ಳಲು ಹೇಳಿದಾಗ ಅದನ್ನು ನರಸಮ್ಮ ನಯವಾಗಿಯೇ ನಿರಾಕರಿಸಿದ್ದಳು. ಹೀಗೆ ಒಬ್ಬ ಹೆಂಡತಿಯಾಗಿ, ತಾಯಿಯಾಗಿ, ಹೆಣ್ಣಾಗಿ ಅವಳ ತ್ಯಾಗಕ್ಕೆ ಯಾವುದೇ ಅಂಶವು

ಸರಿಸಮವಲ್ಲ. ಅವಳು ಕ್ಷಮಯಾಧರಿತ್ರಿ, ಕರುಣಾಮಯಿ. ಮುರಿದು ಬೀಳುತ್ತಿದ್ದ ಸಂಸಾರವನ್ನು ನೆಟ್ಟಗೆ ನಿಲ್ಲಿಸಿ ಅದು ತಲೆ ಎತ್ತಿ ಬಾಳುವಂತೆ ಮಾಡಲು ನರಸಮ್ಮನು ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿಗೆ ವಿಶೇಷ ಸ್ಥಾನವಿದೆ. ಪುರಾಣ, ಇತಿಹಾಸಗಳಲ್ಲಿ ಹಲವು ಕಥೆಗಳ ಮೂಲಕ ಇದನ್ನು ನಿರೂಪಿಸಿದ್ದಾರೆ. ಹೆಣ್ಣಿನ ತ್ಯಾಗ, ಬಲಿದಾನಗಳ ಬಗ್ಗೆ ಹಲವು ಸಂದರ್ಭಗಳಲ್ಲಿ ಅತ್ಯುನ್ನತವಾದ ಅಂಶಗಳು ಹೆಣ್ಣಿನಲ್ಲಿ ಅಡಕವಾಗಿದೆ ಎಂಬುದನ್ನು ಭಾರತೀಯ ಸಂಸ್ಕೃತಿ, ಸಂಪ್ರದಾಯದ ಹಿನ್ನೆಲೆಯಲ್ಲಿ ಕಂಡಿದ್ದೇವೆ. ಅಂತಹ ಹೆಣ್ಣಾಗಿ ನರಸಮ್ಮ ಇಲ್ಲಿ ಕಾಣಿಸಿಕೊಳ್ಳುತ್ತಾಳೆ. ತಮ್ಮ ಮಾವನವರಿಗೆ ಕೊಟ್ಟ ಮಾತಿಗೆ ತನ್ನ ಗಂಡ ವ್ಯವಹಾರ ಜ್ಞಾನ ಇಲ್ಲದವನೆಂದು ತಿಳಿದ ಮೇಲೆ ಜಾಣ್ಮೆಯಿಂದ ಆ ಕುಟುಂಬವನ್ನು ಮೇಲೆತ್ತಿ ನಿಲ್ಲಿಸಿ ಸಮಾಜದಲ್ಲಿ ಒಂದು ಗೌರವಯುತವಾದ ಕುಟುಂಬವಾಗಿ ಪರಿವರ್ತಿಸುತ್ತಾಳೆ. ಇಲ್ಲಿ ನರಸಮ್ಮನು ಪರಿಶ್ರಮ, ತಾಳ್ಮೆ, ಛಲ, ಧೈರ್ಯ ಇವುಗಳ ಪ್ರತೀಕವಾಗಿ ಕಾಣಿಸಿಕೊಳ್ಳುತ್ತಾಳೆ. ಭಾರತೀಯ ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ್ದರೂ, ಆರ್ಥಿಕವಾಗಿ ಪ್ರಬಲವಾಗಿಲ್ಲದಿದ್ದರೂ ತನ್ನ ಪರಿಶ್ರಮದ ಮೂಲಕ ಕೌಟುಂಬಿಕ ಜವಾಬ್ದಾರಿಯನ್ನು ನಾನು ಹೊರಬಲ್ಲೆ ಎಂದು ಸಾಬೀತುಪಡಿಸುವ, ಆ ಮೂಲಕ ಭಾರತ ನಾರಿಯ ತಾಕತ್ತು ಎಂಥದ್ದು ಎಂಬುದನ್ನು ತೋರಿಸಿದ್ದಾಳೆ.

ಆದರೆ ಕೆಲವೊಮ್ಮೆ ಹೆಣ್ಣು ಮುನಿದು ತನ್ನ ಸಂಸಾರವನ್ನು ಬೀದಿಗೆ ತರುವ, ತಳ್ಳುವ ಕಾರ್ಯಗಳು ನಡೆಯುತ್ತದೆ. ಎಲ್ಲವನ್ನು ಸರಿದಾರಿಗೆ ತಂದು ನರಸಮ್ಮ ಇದ್ದಕ್ಕಿದ್ದ ಹಾಗೆ ಕಣ್ಣು ಮುಚ್ಚಿದರೆ, ಮತ್ತೊಂದೆಡೆ ಅವಳ ಸೊಸೆಯಾದ ವೆಂಕಮ್ಮನು ಮನೆಯೊಂದು ಮೂರು ಬಾಗಿಲಾಗುವುದಕ್ಕೂ ನಾಂದಿ ಹಾಡುತ್ತಾಳೆ. ಮನೆಯ ಜವಾಬ್ದಾರಿಯನ್ನು ಹೊರುವ ಹಂಬಲವಿದ್ದರೂ ಅದನ್ನು ಸರಿದೂಗಿಸುವ, ನಡೆಸಿಕೊಂಡು ಹೋಗುವ ಚಾಕಚಕ್ಯತೆಯಾಗಲಿ, ಬುದ್ಧಿವಂತಿಕೆಯಾಗಲಿ ಸೊಸೆಯಾದ ವೆಂಕಮ್ಮಳಿಗೆ ಇರಲಿಲ್ಲ. ಅದನ್ನು ಯಜಮಾನಿಕೆಯ ಗತ್ತು ಎಂದು ಭಾವಿಸಿಕೊಂಡು ತನ್ನ ಮಾತಿಗೆ ಎಲ್ಲರೂ ಬೆಲೆ ಕೊಡಬೇಕು. ಅತ್ತೆಯ ನಂತರದ ಸ್ಥಾನ ತನ್ನದೆಂದು ತಿಳಿದು ಅಧಿಕಾರ ಚಲಾಯಿಸಲು ಹೋಗುತ್ತಾಳೆ. ಆದರೆ ವೆಂಕಮ್ಮನ ಯೋಗ್ಯತೆ ಏನೆಂಬುದು ಆರಂಭದಲ್ಲಿ ತಿಳಿಯುತ್ತದೆ. ಅದನ್ನು ಒಂದು ಅಧಿಕಾರ ಎಂದು ಭಾವಿಸಿದ ವೆಂಕಮ್ಮ ತನ್ನ ಗಂಡನ ಮೂಲಕ ತನ್ನ ಹಿಡಿತವನ್ನು ಆರಂಭಿಸಿದಳು.

ಸಾಮಾಜಿಕ ಸಂರಚನೆಯ ವಿಷಯದಲ್ಲಿ ಕುಟುಂಬವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಈ ಹಿನ್ನೆಲೆಯಲ್ಲಿ ವೆಂಕಮ್ಮಳು ತನ್ನ ಅತ್ತೆಗೆ ಯಾವ ರೀತಿಯಿಂದಲೂ ಸಾಟಿಯಾಗುವುದಿಲ್ಲ. ಏಕೆಂದರೆ ನರಸಮ್ಮ ಎಂದೂ ತಾನು ಅಧಿಕಾರ ನಡೆಸುತ್ತಿದ್ದೇನೆ ಎಂದು ಕೊಂಡವಳಲ್ಲ. ಆದರೆ ತಿರುಕನಿಗೆ ಐಶ್ವರ್ಯ ಬಂದರೆ ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿದನಂತೆ" ಎಂಬ ಮಾತಿನಂತೆ ವೆಂಕಮ್ಮ ಮನೆಯ ಎಲ್ಲಾ ವಿಷಯದಲ್ಲೂ ಮೂಗು ತೂರಿಸಲು ಆರಂಭಿಸಿದಳು. ಅಲ್ಲದೆ ತಾನು ಈ ಮನೆಯ ಒಡತಿ, ತನ್ನ ಆಣತಿಯಂತೆಯೇ

ಎಲ್ಲವೂ ನಡೆಯಬೇಕೆಂಬ ಅಹಂಕಾರ ಧೋರಣೆ ಇದ್ದಿದ್ದರಿಂದ ಆ ಮನೆಯು ಸೂತ್ರ ಹರಿದ ಗಾಳಿಪಟದಂತಾಯಿತು. ಮನೆಯ ವ್ಯವಹಾರಗಳೆಲ್ಲಾ ಅಸ್ತವ್ಯಸ್ತವಾಗ ತೊಡಗಿತು.

ಇದು ವೆಂಕಮ್ಮಳು ತನ್ನ ಮೈದುನ ಶೇಷಾಚಲನನ್ನು ತನ್ನ ಅತ್ತೆಯ ಸಾವಿನ ನಂತರ, ಗಮನಿಸುವ ರೀತಿಯ ಮೂಲಕ ಆರಂಭವಾಗುತ್ತದೆ. ಶೇಷಾಚಲನಿಗೆ ಊಟ ನೀಡುವ, ತಟ್ಟೆ ಎತ್ತುವ, ಅವನನ್ನು ಮಾತನಾಡಿಸುವ ಹೀಗೆ ಹಲವು ವಿಷಯಗಳಲ್ಲಿ ಅವಳ ವರ್ತನೆಯು ದಿನೇ ದಿನೇ ಸಂಪೂರ್ಣವಾಗಿ ಬದಲಾಗತೊಡಗಿತು. ಇದನ್ನು ತನ್ನ ಅಣ್ಣ ಶ್ರೀನಿವಾಸವಧಾನಿ ಹತ್ತಿರ ಹೇಳಿದರೆ ಅವನು ಹೆಂಡತಿಯ ದಾಸನಾಗಿದ್ದು ಯಾವುದೇ ಪ್ರಯೋಜನವಾಗಲಿಲ್ಲ. ಹಾಗೆಯೇ ತಮ್ಮನ ವಿಷಯದಲ್ಲಿ ಅವನು ಯಾವುದೇ ಮಾತನಾಡದೇ ಸುಮ್ಮನಿದ್ದುದು ವೆಂಕಮ್ಮಳ ಅಧಿಕಾರ ಇನ್ನೂ ವಿಸ್ತಾರಗೊಳ್ಳಲು ಕಾರಣವಾಯಿತು.

ತನ್ನ ತಂಗಿ ಪದ್ಮಾವತಿಯ ನಿಷೇಕ ಮಾಡಿ ಮುಗಿಸಿ ಅವಳನ್ನು ಗಂಡನ ಮನೆಗೆ ಕಳುಹಿಸುವ ವಿಚಾರದಲ್ಲೂ ವೆಂಕಮ್ಮ ಗಂಡನ ಮೂಲಕ ಯೋಜನೆಯೊಂದನ್ನು ರೂಪಿಸಿ ಅನಂತಶೆಟ್ಟರ ಬಳಿ ಸಾಲವನ್ನು ಕೊಡಿಸಿ ತಂಗಿಯ ನಿಷೇಕದ ಕಾರ್ಯವನ್ನು ಮಾಡಿ ಮುಗಿಸುತ್ತಾನೆ. ಆದರೆ ಇದರಲ್ಲಿ ಯಾವುದೇ ಕಪಟವನ್ನು ಅರಿಯದಂತಹ ಶೇಷಾಚಲನು ತನ್ನ ಅಣ್ಣ-ಅತ್ತಿಗೆಯವರು ತಂದೆ-ತಾಯಿಗೆ ಸಮಾನ. ಅವರು ನನಗೆ ಮೋಸ ಮಾಡುತ್ತಾರೆಂದು ಶೇಷಾಚಲನು ಕನಸಲ್ಲೂ ಎಣಿಸಿರಲಿಲ್ಲ.

ಮುಂದೆ ಅತ್ತಿಗೆ ವೆಂಕಮ್ಮನ ತಂಗಿ ಭಾಗೀರಥಿಯನ್ನು ಮದುವೆ ಮಾಡಿಕೊಳ್ಳುವ ಸಮಯ ಬಂದಾಗ, ವೆಂಕಮ್ಮ ತನ್ನ ತವರಿನ ಗಂಡಸರ ಮುಂದೆ ತಲೆ ಎತ್ತಿ ಮಾತಾಡದವಳು ತಂದೆ ಪಾಪಾಶಾಸ್ತ್ರಿಗಳ ಮುಂದೆ ತನಗೆ ಈ ಮದುವೆಯಲ್ಲಿ ಇಷ್ಟ ಇಲ್ಲವೆಂದು ಮಾತಾಡಿದುದು ತಂದೆಯ ಪಿತ್ತ ನೆತ್ತಿಗೇರುವಂತೆ ಮಾಡಿತ್ತು ಮತ್ತು ಭಾಗೀರಥಿಯು ಶೇಷಾಚಲನಿಗೆ ಅವನ ಅಣ್ಣ-ಅತ್ತಿಗೆ ಮಾಡಿರುವ ಮೋಸವನ್ನು ಅವನ ಬಳಿ ಹೇಳಿ, ಅದು ಮುಂದೆ ಆಸ್ತಿಯನ್ನು ಹಂಚುವಷ್ಟರ ಮಟ್ಟಕ್ಕೆ ಹೋಗಿ ಇಡೀ ಮನೆಯೇ ಎರಡು ಹೋಳಾಯಿತು. ಇಲ್ಲೆಲ್ಲಾ ಮನೆಯ ಯಜಮಾನನಾಗಿದ್ದ ರಾಮಾವಧಾನಿಯು ಯಾವುದನ್ನು ತಿಳಿಯದ ಮೂಕ ಪ್ರೇಕ್ಷಕನಾಗಿದ್ದ.

ಒಟ್ಟಾರೆ ಒಂದು ಸಾಮಾಜಿಕ ಸಂರಚನೆಯಲ್ಲಿ ಕೌಟುಂಬಿಕ ವ್ಯವಸ್ಥೆಯು ಉನ್ನತ ಶ್ರೇಣಿಯಲ್ಲಿದ್ದು, 'ಹೆಣ್ಣು ಕಟ್ಟಿದ ಮನೆ' ಎಂಬ ಕಾದಂಬರಿಯ ಮೂಲಕ ತ.ರಾ.ಸು. ರವರು ಭಾರತೀಯ ಸಾಮಾಜಿಕ ಸ್ವರೂಪವೇ ಕುಟುಂಬ ವ್ಯವಸ್ಥೆಯ ಮೇಲೆ ನಿಂತಿದೆ ಎಂಬುದನ್ನು ಮತ್ತೊಮ್ಮೆ ನಿರೂಪಿಸಿದ್ದಾರೆ. ಯಾವುದೇ ಸಾಹಿತ್ಯವನ್ನು ಎರಡೂ ಆಯಾಮಗಳಲ್ಲಿ ನೋಡಬೇಕಾಗಿರುವುದರಿಂದ ಅದರ ಸಾಧಕ ಬಾಧಕಗಳು ಕುಟುಂಬ ವ್ಯವಸ್ಥೆಯ ಮೇಲೆಯೇ ನಿಂತಿರುತ್ತದೆ. ಆದ್ದರಿಂದ ಹೆಣ್ಣು ಸಂಸಾರದ ಕಣ್ಣು ಎಂಬುದು ನೂರಕ್ಕೆ ನೂರರಷ್ಟು ಸತ್ಯವಾದ ಮಾತಾಗಿದೆ.

ತ.ರಾ.ಸು. ಅವರ ಹಲವು ಸಾಮಾಜಿಕ ಕಾದಂಬರಿಗಳಲ್ಲಿ 'ಚಂದನದ ಗೊಂಬೆ'ಯು ಒಂದು ಸಾಮಾಜಿಕ ಸಂರಚನೆಯಲ್ಲಿ ಕೌಟುಂಬಿಕ ವ್ಯವಸ್ಥೆಯು ಬಹುಮುಖ್ಯ ಪಾತ್ರವನ್ನು ವಹಿಸುವುದರಿಂದ ಈ ಕಾದಂಬರಿಯಲ್ಲೂ ಕುಟುಂಬದಲ್ಲಿ ನಡೆಯುವ ಹಲವು ವಿಷಯಗಳು ಬಂದು ಹೋಗುತ್ತಿರುತ್ತವೆ. ಹೆಸರಿಗೆ ತಕ್ಕಂತೆ 'ಚಂದನದ ಗೊಂಬೆ' ಯಾಗಿಯೇ ರತ್ನಮ್ಮಳು ಜೀವನದಲ್ಲಿ ಏನೇ ಕಷ್ಟ ಬಂದರೂ ಅದನ್ನು ಜಯಿಸಿ ಮುನ್ನುಗ್ಗುವ ಪ್ರವೃತ್ತಿಯಿರುವ ಹೆಣ್ಣು. ಮದುವೆಯಾಗಿ ಕೆಲವೇ ವರ್ಷಕ್ಕೆ ವಿಧವೆಯಾದ ರತ್ನಮ್ಮಳ ಬದುಕು ಗೊತ್ತು ಗುರಿಯಿಲ್ಲದ ಪಯಣಿಗನಂತಾಗುತ್ತದೆ. ಗಂಡನಿಲ್ಲದ ಹೆಣ್ಣನ್ನು ಸಮಾಜವು ನೋಡುವ ದೃಷ್ಟಿಕೋನವೇ ಬೇರೆಯಾಗಿರುತ್ತದೆ. ಆದರೆ ತನ್ನ ಗಂಡನು ಬಾಳಿದ ಮನೆಯಲ್ಲೆ ತನ್ನ ಬದುಕು ಮುಂದುವರಿಯಬೇಕೆಂದು ಪಣ ತೊಟ್ಟು ಜೀವನದ ಬಂಡಿಯನ್ನು ಮುನ್ನಡೆಸಲು ತಯಾರಾಗುತ್ತಾಳೆ.

ರತ್ನಮ್ಮಳ ಗಂಡ ಸೀತಾರಾಮಯ್ಯ ಬದುಕಿದ್ದಾಗ ಎಲ್ಲರನ್ನೂ ತನ್ನ ಕುಟುಂಬ ಸದಸ್ಯರಂತೆಯೇ ಕಂಡವನು. ಹಾಗೆಯೇ ಸೋಮನಹಳ್ಳಿಯ ಜನತೆಯು ಅವನನ್ನು ಹಾಗೆಯೇ ಕಾಣುತ್ತಿದ್ದರು. ಇದು ಭಾರತೀಯ ಸಮಾಜದಲ್ಲಿ ಕಂಡು ಬರುವ ಅಪರೂಪದ ಸಂಗತಿ. ಜಾತಿ, ಮತ, ಧರ್ಮ, ಕುಲಗಳೆಂಬ ಪಾಶಗಳಲ್ಲಿ ಒದ್ದಾಡುತ್ತಿರುವ ಈ ಸಮಾಜದಲ್ಲಿ ಒಬ್ಬ ಅನಾಥನಾಗಿದ್ದ ವ್ಯಕ್ತಿ ಸೀತಾರಾಮುವನ್ನು ಇಡೀ ಹಳ್ಳಿಯ ಜನತೆ ತಮ್ಮ ಮನೆಮಗನಂತೆ ಕಾಣುತ್ತಿದ್ದರು. ಅಂದರೆ ಇಲ್ಲಿ ರಕ್ತ ಹಂಚಿಕೊಂಡು ಹುಟ್ಟಿ ಬೆಳೆದವರು ಮಾತ್ರ ನೆಂಟರು, ಬಂಧುಗಳಲ್ಲ. ಪ್ರೀತಿ, ವಿಶ್ವಾಸ ತೋರುವ ಎಲ್ಲಾ ಜನರು ಜಾತಿ, ಮತ, ಭೇದಗಳ ಅಂತರವಿಲ್ಲದೇ ಸಹೋದರರಾಗಿ ಬದುಕಬಹುದು. ಇದು ಭಾರತೀಯ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬಹುಮುಖ್ಯವಾದುದು. ರಕ್ತ ಸಂಬಂಧಕ್ಕಿಂತ ಪ್ರೀತಿ, ಸ್ನೇಹವೇ ದೊಡ್ಡದು ಎಂದು ಸೀತಾರಾಮುವಿನ ಪಾತ್ರ ನಮಗೆ ನಿರೂಪಿಸುತ್ತದೆ.

ಸೀತಾರಾಮು ಹುಟ್ಟಿದ ನಂತರ ಐದು ವರ್ಷಕ್ಕೆ ತಾಯಿ ತೀರಿಕೊಂಡಿದ್ದಳು. ತನ್ನ ತಂದೆ ನಾರಾಯಣಪ್ಪರ ಪೋಷಣೆಯಲ್ಲಿ ಬೆಳೆದನು. ಆದರೆ ಜೀವನದಲ್ಲಿ ಜವಾಬ್ಧಾರಿಯನ್ನು ಕಲಿಯುವ ಹೊತ್ತಿಗೆ ತಂದೆಯು ಕಣ್ಣುಮುಚ್ಚಿಕೊಂಡರು. ಸೀತಾರಾಮುವಿಗೆ ನಿರ್ಧಿಷ್ಟ ಕುಟುಂಬವಿಲ್ಲದೇ ಅನಾಥನಾದ. ಆದರೆ ಇಡೀ ಸೋಮನಹಳ್ಳಿ ಜನತೆಯನ್ನೇ ಅವನು ಅಣ್ಣ, ಅಕ್ಕ, ಅತ್ತೆ, ಮಾವ ಮುಂತಾದ ಸಂಬಂಧಗಳ ಮೂಲಕವೇ ಮಾತನಾಡಿಸುತ್ತಿದ್ದನು. ಈ ಮೂಲಕ ಇಡೀ ಸೋಮನಹಳ್ಳಿಯ ಜನತೆಯೇ ಅವನಿಗೆ ಬಂಧುಗಳಾದರು. ಈ ಮೂಲಕ ಊರಿನ ಯಾರನ್ನೇ ಆಗಲಿ ಅಷ್ಟೇ ಪ್ರೀತಿಯಿಂದ ಸಲುಗೆಯಿಂದ ಮಾತನಾಡಿಸುತ್ತಿದ್ದ. ಆದ್ದರಿಂದ ಇಡೀ ಊರೇ ಅವನ ಕುಟುಂಬವಾಯಿತು.

ಹೀಗೆ ಸೋಮನಹಳ್ಳಿಯಲ್ಲಿ ಅತೀ ಹೆಚ್ಚು ಸಲುಗೆ, ಪ್ರೀತಿಯಿಂದ ಮಾಡನಾಡಿಸುತ್ತಿದ್ದುದು ಶ್ರೀನಿವಾಸರಾಯರು ಮತ್ತು ಅವರ ಧರ್ಮಪತ್ನಿ ಸೀತಮ್ಮನವರನ್ನು. ಸೀತಾರಾಮುವಿನ ತಂದೆಯ ಸ್ನೇಹಿತರಾಗಿದ್ದ ಶ್ರೀನಿವಾಸರಾಯರು ಸೀತಾರಾಮುವನ್ನು ತನ್ನ ಮಗ ರಾಘವೇಂದ್ರರಾಯನಷ್ಟೇ ಪ್ರೀತಿಯಿಂದ

ನೋಡಿಕೊಂಡರು. ಹೀಗಾಗಿ ಸೀತಾರಾಮುವು ಅವರಿಬ್ಬರನ್ನು ಅತ್ತೆ ಮಾವ ಎಂದೇ ಕರೆಯಲು ಆರಂಭಿಸಿದನು. ಆ ಸಂಬಂಧ ಮುಂದೆ ಶಾಶ್ವತವಾಗಿ ಉಳಿದುಕೊಂಡಿತು. ಶ್ರೀನಿವಾಸರಾಯರ ಕುಟುಂಬವನ್ನೇ ತನ್ನ ಸ್ವಂತ ಕುಟುಂಬವೆಂದು ಭಾವಿಸಿದನು. ಶ್ರೀನಿವಾಸರಾಯರು ಸೀತಮ್ಮನವರು ಕೂಡಾ ತಮ್ಮ ಮಗನಿಗೆ ನೀಡುತ್ತಿದ್ದ ಪ್ರೀತಿಯನ್ನೇ ಇವನಿಗೂ ಉಣಬಡಿಸಿದರು.

ಶ್ರೀನಿವಾಸರಾಯರು ಮತ್ತು ಸೀತಮ್ಮ ಸೇರಿ ಸೀತಾರಾಮುವಿಗೆ ಮದುವೆಯನ್ನು ಮಾಡಿಕೊಳ್ಳಲು ಆಗಾಗ ಒತ್ತಾಯಿಸುತ್ತಿದ್ದರು. ಆಗ ಸೀತಾರಾಮು ನಿರಾಕರಿಸುತ್ತಿದ್ದರೆ ಮದುವೆ, ಹೆಂಡತಿ, ಸಂಸಾರ ಎಂಬ ಬಂಧಗಳ ಬಗ್ಗೆ ಅವರು ವಿವರಿಸುತ್ತಿದ್ದರು. ಒಬ್ಬ ಮನುಷ್ಯನಿಗೆ ಜೀವನದಲ್ಲಿ ಮದುವೆ ಎಷ್ಟು ಅವಶ್ಯಕ ಎಂಬುದನ್ನು ತಿಳಿಸಿ ಹೇಳಿ ಆ ಮೂಲಕ ಕೌಟುಂಬಿಕ ಜೀವನವು ಪ್ರತಿಯೊಬ್ಬ ಮನುಷ್ಯನ ಜೀವನದಲ್ಲೂ ಅತೀ ಮುಖ್ಯ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಅವರು ಹೇಳುತ್ತಿದ್ದರು. ಕುಟುಂಬದ ಜೀವನವು ವಿಸ್ತಾರವಾಗಬೇಕಾದರೆ, ಮನುಷ್ಯನ ಜೀವನವು ಸಾರ್ಥಕಗೊಳ್ಳಬೇಕಾದರೆ ಮದುವೆಯೆಂಬ ಅನುಬಂಧ ಬಹಳ ಮುಖ್ಯವೆಂದು ಇಲ್ಲಿ ವಿವರಿಸಿದ್ದಾರೆ.

ಸೀತಾರಾಮು ಅತ್ತೆ–ಮಾವ ಎಂದು ಭಾವಿಸಿದ ಶ್ರೀನಿವಾಸರಾಯರು ಮತ್ತು ಸೀತಮ್ಮ ದಂಪತಿಗಳೇ ಅವನ ಕುಟುಂಬದ ವಿಸ್ತರಣೆಯ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾರೆ. "ಯಾವ ಹೂವು ಯಾರ ಮುಡಿಗೋ" ಎಂಬಂತೆ ಕೆರೆ ಸಂತೆ ಹಳ್ಳಿಯ ಲಕ್ಷ್ಮಣರಾಯರು ತಮ್ಮ ದಣಿವು ನಿವಾರಿಸಿಕೊಳ್ಳಲು ಶ್ರೀನಿವಾಸರಾಯರ ಜಗಲಿಕಟ್ಟೆಯ ಮೇಲೆ ಕೂತಿದ್ದು, ಮುಂದೆ ತಮ್ಮ ಮಗಳು ರತ್ನಳನ್ನೇ ಅದೇ ಮನೆಯ ಸೀತಾರಾಮುವಿಗೆ ಕೊಟ್ಟು ಮದುವೆ ಮಾಡಿಕೊಡುವುದು ದೈವೇಚ್ಛೆಯಾಗಿತ್ತು. ದೇವರ ಸಂಕಲ್ಪದಿಂದಲೇ ಸೀತಾರಾಮು–ರತ್ನಮ್ಮ ಸತಿಪತಿಗಳಾಗಿದ್ದು ಮತ್ತು ತಮ್ಮ ಕುಟುಂಬದವರೆಂದೇ ಭಾವಿಸಿದ ಶ್ರೀನಿವಾಸರಾಯರು ಸೀತಮ್ಮ ಇವರನ್ನೇ ಹೆಣ್ಣು ನೋಡುವುದರಿಂದ ಹಿಡಿದು ಮದುವೆ ಆಗುವವರೆಗೂ ಮದುವೆಯ ಎಲ್ಲಾ ಜವಾಬ್ದಾರಿಗಳನ್ನು ಅವರಿಗೆ ವಹಿಸಿಕೊಟ್ಟಿದ್ದು ಭಾರತೀಯ ಸಮಾಜದಲ್ಲಿ ಸಂಬಂಧಗಳಿಗೆ, ಕುಟುಂಬ ವ್ಯವಸ್ಥೆಗೆ ಇರುವ ಬೆಲೆಯನ್ನು ತೋರಿಸುತ್ತದೆ.

ಮತ್ತೊಂದೆಡೆ ರತ್ನಮ್ಮಳ ತಂದೆ ಲಕ್ಷ್ಮಣರಾಯರು ವಯಸ್ಸಿಗೆ ಬಂದು ಈಗಾಗಲೇ ಮೂರು ವರ್ಷ ಕಳೆದು, ಬೆಳೆದು ನಿಂತಿರುವ ಮಗಳನ್ನು ಎಲ್ಲಾದರೂ ಒಂದು ಒಳ್ಳೆಯ ವರನನ್ನು ನೋಡಿ ಮದುವೆ ಮಾಡಿಕೊಟ್ಟರೆ ತಮ್ಮ ಜವಾಬ್ದಾರಿಯು ಮುಗಿಯುತ್ತದೆಯೆಂಬ ನಿರಾಳ ಭಾವನೆ. ಭಾರತೀಯ ಸಮಾಜದಲ್ಲಿ ಹೆಣ್ಣನ್ನು ನೋಡುವ ಪರಿಕಲ್ಪನೆಯು ಒಂದೇ ಆಗಿದ್ದು ಅದು ರತ್ನಮ್ಮಳ ವಿಷಯದಲ್ಲೂ ಹಾಗೆಯೇ ಆಗಿದೆ. ಹೆಣ್ಣು ಹೆತ್ತವರಿಗೆ ಹೊರೆಯಾಗಿಯೇ ಇದ್ದಾಳೆ. ಕಡುಬಡತನವನ್ನೆ ತನ್ನ ಜೀವನದಲ್ಲಿ ನಿರಂತರವಾಗಿ ತೊಟ್ಟು ಬಂದಿದ್ದ ಲಕ್ಷ್ಮಣರಾಯರು ಅಂದಿನ ಸಾಮಾಜಿಕ ಕಟ್ಟಳೆಗಳಿಗೆ ಹೆದರಿ ತಮ್ಮ ಮಗಳನ್ನು ಒಬ್ಬ ಯೋಗ್ಯ ವರನಿಗೆ ಕೊಟ್ಟು ಲಗ್ನ ಮಾಡಿಕೊಡಬೇಕೆಂದು ಪ್ರಯತ್ನ ಮಾಡುತ್ತಲೇ ಇದ್ದರು. ಇದು ಭಾರತೀಯ

ಸಮಾಜವು ಜವಾಬ್ದಾರಿ ಎಂಬ ಹಣೆಪಟ್ಟಿಯನ್ನು ನೀಡಿ ಹೆಣ್ಣನ್ನು ಯಾವುದೇ ಸಂದರ್ಭದಲ್ಲೂ ಉಚ್ಚ ಸ್ಥಿತಿಗೆ ಕೊಂಡೊಯ್ಯಬಾರದು ಎಂಬ ಮನೋಧೋರಣೆಯನ್ನು ತೋರಿಸುತ್ತಿದೆ.

ಇತ್ತ ಸೀತಾರಾಮುವು ತನಗೆ ಹೆಣ್ಣು ನೀಡುತ್ತಿರುವ ಲಕ್ಷ್ಮಣರಾಯರ ಸ್ಥಿತಿಗತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಅವರಿಗೆ ಹೆಚ್ಚಿನ ಹೊರೆ ನೀಡಬಾರದೆಂದು ಇಡೀ ಸೋಮನಹಳ್ಳಿ ಜನತೆಯೇ ತನ್ನ ಕುಟುಂಬ ವರ್ಗದವರು ಎಂದುಕೊಂಡಿದ್ದ ಸೀತಾರಾಮು ಅವರನ್ನು ಯಾರು ಮದುವೆಗೆ ಬರಬೇಡಿ ಎಂದು ಹೇಳುತ್ತಾನೆ. ಆದರೆ ರಕ್ತ ಸಂಬಂಧಕ್ಕಿಂತ ಪ್ರೀತಿ, ಸ್ನೇಹವೇ ದೊಡ್ಡದೆಂದು ತೋರಿಸಿದ ಆ ಜನತೆ ಸೀತಾರಾಮುವನ್ನು ತಮ್ಮ ಮನೆಮಗನೆಂದು ಭಾವಿಸಿ ತಮ್ಮ ಸ್ವಂತ ಹಣದಲ್ಲಿ ಹೋಗಿ ವಧು-ವರರನ್ನು ಆಶೀರ್ವದಿಸಿದರು.

ಸೀತಾರಾಮುವಿನ ಮದುವೆಯು ನಡೆದು ಹೋಗಿ ತನ್ನ ಗಂಡನ ಮನೆಗೆ ಬಂದ ರತ್ನಮ್ಮ ಶ್ರೀನಿವಾಸರಾಯರು – ಸೀತಮ್ಮರನ್ನು ತನ್ನ ಸ್ವಂತ ತಂದೆ-ತಾಯಿಯೆಂದೇ ಭಾವಿಸಿ ಅವರಿಗೆ ತನ್ನ ಮನಸ್ಸಿನಲ್ಲೂ ಅದೇ ಸ್ಥಾನವನ್ನು ನೀಡಿ ಜೀವನದ ಬಂಡಿಯನ್ನು ತನ್ನ ಗಂಡನಾದ ಸೀತಾರಾಮುವಿನ ಜೊತೆ ಎಳೆಯಲು ಅಣಿಯಾದಳು. ಇಡೀ ಸೋಮನಹಳ್ಳಿಯೇ ಸಂಸಾರ ಮಾಡಲು ಮುತ್ತಿನಂಥ ಹೆಣ್ಣು ಎಂದು ರತ್ನಮ್ಮಳ ಬಗ್ಗೆ ಬಾಯ್ತುಂಬ ಹೊಗಳುತ್ತಿದ್ದವು. ಆಕೆಯು ತನ್ನ ಪತಿರಾಯನಂತೆಯೇ ವ್ಯಕ್ತಿತ್ವದವಳಾದ್ದರಿಂದ, ಸೀತಾರಾಮು ಮದುವೆಗೆ ಮೊದಲು ಹೇಗಿದ್ದನೋ ಮದುವೆ ನಂತರವೂ ಅವನ ವ್ಯಕ್ತಿತ್ವದಲ್ಲಿ ಏನೂ ಬದಲಾಗಲಿಲ್ಲ. ಮನೆಯಲ್ಲಿ ತನಗೊಬ್ಬ ಹೆಂಡತಿ ಇರುವಳು, ತನಗಾಗಿ ಕಾಯುತ್ತಿರುವಳು ಇಂಥ ಯಾವುದೇ ಯೋಚನೆ ಇಲ್ಲದೇ ಉಂಡಾಡಿ ಗುಂಡನಂತೆ ಹೊರಗೆ ಸುತ್ತುತ್ತಿದ್ದ. ಇಲ್ಲಿ ಅವನು ಎಷ್ಟೇ ಒಳ್ಳೆಯವನಾದರೂ ತನ್ನನ್ನು ನಂಬಿ ಒಂದು ಹೆಣ್ಣು ತನ್ನ ಮನೆ ಬೆಳಗಲು ಬಂದಿರುವಳೆಂಬ ಪರಿವೆ ಇಲ್ಲದೇ ಸುತ್ತುತ್ತಿದ್ದುದು "ಊರಿಗೆ ಉಪಕಾರಿ, ಮನೆಗೆ ಮಾರಿ" ಎಂಬ ಗಾದೆಯನ್ನು ನೆನಪಿಸುತ್ತದೆ.

ಆದರೆ ವಿಧಿಯ ಆಟದ ಮುಂದೆ ನರಮನುಷ್ಯರು ಎಷ್ಟರವರು ಎಂಬಂತೆ ಒಮ್ಮೆ ಮಳೆಯಲ್ಲಿ ನೆನೆದಿದ್ದ ಸೀತಾರಾಮು ವಿಷಮಶೀತ ಜ್ವರಕ್ಕೆ ತುತ್ತಾಗಿ ಸತ್ತೇ ಹೋದನು. ರತ್ನಮ್ಮಳ ಬದುಕು ಇಲ್ಲಿಂದ ಮತ್ತೊಂದು ತಿರುವನ್ನು ಪಡೆದುಕೊಳ್ಳಲು ಆರಂಭಿಸಿತು. ಹೆಣ್ಣಿಗೆ ಒಂದು ಗಂಡಿನ ಆಸರೆ ಬೇಕೇ ಬೇಕು ಎಂಬಂತೆ ಅವಳಿಗೆ ಅಣ್ಣನ ಸ್ಥಾನದಲ್ಲಿ ನಿಂತು ಅವಳ ಕಷ್ಟಗಳಿಗೆ ಹೆಗಲು ಕೊಡುತ್ತಿದ್ದ ಶ್ರೀನಿವಾಸರಾಯರ ಮಗ ರಾಘವೇಂದ್ರರಾಯರ ಬಗ್ಗೆ ಇಲ್ಲಸಲ್ಲದ ಊಹಾಪೋಹಗಳನ್ನು ಎಬ್ಬಿಸಿ ಗಂಗೆಯಷ್ಟೇ ಪವಿತ್ರಳಾದ ರತ್ನಮ್ಮಳ ಶೀಲದ ಬಗ್ಗೆ ಕೆಲವು ಕಿಡಿಗೇಡಿಗಳು ಸಂಶಯವನ್ನು ತೋರುತ್ತಾರೆ. ಇದು ಕೌಟುಂಬಿಕ ವ್ಯವಸ್ಥೆಯಲ್ಲಿ ಒಂದು ಗಂಡು ಇಲ್ಲದಿದ್ದರೆ ಪುರುಷ ಪ್ರಧಾನ ವ್ಯವಸ್ಥೆಯು ಹೆಣ್ಣಿಗೆ ವೇಶ್ಯೆಯಂಬ ಪಟ್ಟವನ್ನು ಕಟ್ಟಿ, ವಿಧವೆಯಾಗಿ ಈಗಾಗಲೇ ದುಃಖಗಳ ಸರಮಾಲೆಯನ್ನೇ ಧರಿಸಿರುವ ರತ್ನಮ್ಮನಿಗೆ ನೋವಿನ ಮೇಲೆ ನೋವು ನೀಡುವುದನ್ನು ತೋರಿಸುತ್ತದೆ.

ಒಟ್ಟಾರೆ ಸಾಮಾಜಿಕ ಸಂರಚನೆಯ ಹಾದಿಯಲ್ಲಿ 'ಚಂದನದ ಗೊಂಬೆ' ಕಾದಂಬರಿಯಲ್ಲಿ ಬರುವ ಕೌಟುಂಬಿಕ ಚಿತ್ರಣವು ದುಃಖಮಯ, ದುರಂತಮಯವಾಗಿದ್ದು, ರತ್ನಮ್ಮ ಗಂಡನನ್ನು ಕಳೆದುಕೊಂಡು ವಿಧವೆಯಾಗಿದ್ದಾಗ ಈ ಪುರುಷ ಪ್ರಧಾನ ವ್ಯವಸ್ಥೆ ಅವಳ ಶೀಲದ ಮೇಲೆ ಶಂಕೆ ಪಟ್ಟು ಅವಳನ್ನು ಅನಾಚಾರದ ಕೂಪಕ್ಕೆ ತಳ್ಳಲು ಸಿದ್ಧವಾಗುತ್ತದೆ. ಶ್ರೀನಿವಾಸರಾಯ–ಸೀತಮ್ಮರ ಕುಟುಂಬವು ಸೀತಾರಾಮುವನ್ನು ತಮ್ಮ ಮಗನಂತೆಯೇ ನೋಡಿಕೊಳ್ಳುತ್ತಾ ಕೌಟುಂಬಿಕ ವ್ಯವಸ್ಥೆಯೆಂದರೆ ಅದು ಹೀಗಿರಬೇಕು ಎಂದು ತೋರಿಸುತ್ತದೆ. ಮತ್ತೊಂದೆಡೆ ರತ್ನಮ್ಮಳ ತಂದೆ ಲಕ್ಷ್ಮಣರಾಯರು ಮಗಳು ವಿಧವೆಯಾದ ನಂತರ ಸಮಾಜದ ಕೊಂಕುಮಾತುಗಳಿಗೆ ಹೆದರಿ ತಮ್ಮ ಮನೆಗೆ ಕರೆದುಕೊಂಡು ಹೋಗಲು ಬರುತ್ತಾರೆ. ಆದರೆ ಅವುಗಳಿಗೆಲ್ಲಾ ತನ್ನ ಮುಂದಿನ ಬದುಕಿನ ಮೂಲಕವೇ ರತ್ನಮ್ಮ ಉತ್ತರ ಕೊಟ್ಟು ಒಂದು ದಿಟ್ಟ ಹೆಣ್ಣಾಗಿ ಜೀವನ ನಡೆಸುತ್ತಾಳೆ.

ತ.ರಾ.ಸು. ರವರು ರಚಿಸಿದ ಸಾಮಾಜಿಕ ಕಾದಂಬರಿಗಳಲ್ಲಿ ಬಹಳ ವಿಶೇಷವಾದ ಕಾದಂಬರಿ ಎಂದರೆ ಅದು 'ಮಸಣದ ಹೂವು' ಮಡಿವಂತಿಕೆಯ ಸಮಾಜದಲ್ಲಿ ವೇಶ್ಯಾವಾಟಿಕೆಯನ್ನು ತನ್ನ ಕಾದಂಬರಿಯ ವಸ್ತುವನ್ನಾಗಿ ಮಾಡಿಕೊಂಡ ತ.ರಾ.ಸು. ರವರು ಹಲವು ಟೀಕೆಗಳನ್ನು ಎದುರಿಸಬೇಕಾಯಿತು. ಏಕೆಂದರೆ ಸಂಪ್ರದಾಯದ ಹಿನ್ನೆಲೆಯಲ್ಲಿ ಭಾರತೀಯ ಸಾಮಾಜಿಕ ಸಂರಚನೆಯು ಇದ್ದಿದ್ದರಿಂದ ತ.ರಾ.ಸು. ರವರಿಗೆ ಅಂದಿನ ಹಲವು ಕಾದಂಬರಿಕಾರರಿಂದ ವಿರೋಧವು ಬಂದಿತು. ಆದರೆ ಅದನ್ನೆಲ್ಲಾ ಮೀರಿ ಕನ್ನಡದ ಸಾಹಿತ್ಯ ಪ್ರಿಯರಿಗೆ 'ಮಸಣದ ಹೂವು' ಕಾದಂಬರಿಯ ಮೂಲಕ ಸಾಹಿತ್ಯದ ಅಭಿರುಚಿಯನ್ನು ಬೆಳೆಸಿದರು. ಈ ಕಾದಂಬರಿಯು ಚಲನಚಿತ್ರವಾಗಿಯೂ ಪ್ರಸಿದ್ಧಿಯಾಗಿ ಕನ್ನಡದ ಪ್ರೇಕ್ಷಕರಿಗೆ ಮನರಂಜನೆಯನ್ನು ನೀಡಿತು.

'ಮಸಣದ ಹೂವು' ಕಾದಂಬರಿಯಲ್ಲಿ ಪ್ರಮುಖ ಪಾತ್ರವೆಂದರೆ ಪಾರ್ವತಿ. ಪಾರ್ವತಿಯ ಜೀವನವು ಈ ನರಕಯಾತನೆಗೂ ಮುಂಚೆ ಜೀವನದ ಬಗ್ಗೆ ಅದೆಷ್ಟೋ ಅಮೂಲ್ಯ ಕನಸುಗಳನ್ನು ಇಟ್ಟುಕೊಂಡು ಒಂದು ಸುಂದರ ಸಂಸಾರದಲ್ಲಿ ತಾನು ಒಬ್ಬಳಾಗಿ, ಜೀವನದ ಎಲ್ಲಾ ಸುಖವನ್ನು ಅನುಭವಿಸಲು ಇತರ ಹೆಣ್ಣುಮಕ್ಕಳಂತೆ ಆಕೆಯು ಇಷ್ಟಪಟ್ಟಿದ್ದಳು. ಆದರೆ ವಿಧಿಯ ನಾಟಕದ ಮುಂದೆ ಎಲ್ಲವೂ ನಿರ್ನಾಮವಾಗಿ ಹೋಯಿತು. ಚಿಕ್ಕ ವಯಸ್ಸಿನಲ್ಲೆ ತನ್ನ ತಾಯಿಯನ್ನು ಕಳೆದುಕೊಂಡು ತಂದೆ ದೇವಾಂಗ ರಾಮಯ್ಯರ ಸುರ್ಪದಿಯಲ್ಲಿ ಬೆಳೆದ ಪಾರ್ವತಿಯು ಎಲ್ಲಾ ಹೆಣ್ಣು ಮಕ್ಕಳಂತೆ ಭವಿಷ್ಯದಲ್ಲಿ ಮದುವೆಯಾಗಿ, ಗಂಡ–ಮನೆ–ಮಕ್ಕಳು ಎಂಬ ಸಂಸಾರದ ನೊಗವನ್ನು ಎಳೆಯಬೇಕೆಂದು ತೀರ್ಮಾನಿಸಿದ್ದಳು ಅಲ್ಲದೆ ತಂದೆಯೇ ಸರ್ವಸ್ವವಾದ್ದರಿಂದ ತಂದೆಯ ಮಾತನ್ನು ಎಂದೂ ಮೀರುತ್ತಿರಲಿಲ್ಲ. ರಾಮಯ್ಯ ಬಡವನಾದರೂ ತನ್ನ ಮಗಳಿಗೆ ಯಾವುದೇ ಕೊರಗು ಬರದಂತೆ ಸಾಕಿ ಸಲಹಿದ್ದನು. ಹಾಗೆಯೇ ಪಾರ್ವತಿಯು ತಂದೆಯು ಹಾಕಿದ ಗೆರೆಯನ್ನು ದಾಟುತ್ತಿರಲಿಲ್ಲ.

ಪಾರ್ವತಿಯು ನಾಗನನ್ನು ಪ್ರೀತಿಸುತ್ತಿದ್ದಳು. ಅವನು ಇವಳ ಪ್ರೀತಿಯಲ್ಲಿ ಬಂಧಿಯಾಗಿದ್ದನು. ಒಬ್ಬರನ್ನೊಬ್ಬರು ಬಹಳ ಹಚ್ಚಿಕೊಂಡು ತಮ್ಮ ಭವಿಷ್ಯದ ಬಗ್ಗೆ ಸಾವಿರಾರು ಕನಸುಗಳನ್ನು ಕಟ್ಟಿಕೊಂಡಿದ್ದರು. ತಾವಿಬ್ಬರೂ ಸತಿ-ಪತಿಗಳಾಗಿ ತುಂಬು ಜೀವನವನ್ನು ನಡೆಸಬೇಕೆಂಬ ಇರಾದೆಯಲ್ಲಿ ಇದ್ದರು. ಆದರೆ ಬಸವಗಿರಿ ಹಳ್ಳಿಗೆ ಗುಡ್ಡದಂತಿದ್ದ ನರಸಿಂಹಾರೆಡ್ಡಿಯ ಕಣ್ಣು ಹಾಲುಗಲ್ಲದ ಚೆಲುವೆ ಪಾರ್ವತಿಯ ಮೇಲೆ ಎಂದು ಬಿತ್ತೋ ಅಂದೇ ಅವರ ಕೌಟುಂಬಿಕ ವ್ಯವಸ್ಥೆಯ ಕನಸಿಗೆ ಬೆಂಕಿ ಬಿತ್ತು. ಬಡವರಾದರೂ ಸ್ವಾಭಿಮಾನದಿಂದ ಬದುಕು ನಡೆಸುತ್ತಿದ್ದ ರಾಮಯ್ಯ ಮತ್ತು ಮಗಳು ಪಾರ್ವತಿಯ ಬಾಳಿನಲ್ಲಿ ಕತ್ತಲ ರಾತ್ರಿಯ ಕರಾಳ ರಾಕ್ಷಸನಾಗಿ ನರಸಿಂಹಾರೆಡ್ಡಿ ವಕ್ಕರಿಸಿದನು. ಮುಂದೆ ಅವಳನ್ನು ಪಡೆಯಲೇಬೇಕೆಂದು ಪಣ ತೊಟ್ಟಿದ್ದ ನರಸಿಂಹಾರೆಡ್ಡಿ ತನ್ನ ಆಳು ಸೋಮಣ್ಣನ ಮೂಲಕ ಆ ವ್ಯವಸ್ಥೆ ಮಾಡಿಸುತ್ತಾನೆ. ತನ್ನ ಶ್ರೀಮಂತಿಕೆಯಿಂದ ಎಲ್ಲವನ್ನೂ ಕೊಂಡುಕೊಳ್ಳಬಹುದು ಎಂದುಕೊಂಡಿದ್ದ ನರಸಿಂಹಾರೆಡ್ಡಿಯು ತನ್ನ ಚಪಲವನ್ನು ತೀರಿಸಿಕೊಳ್ಳಲು ಒಂದು ಕುಟುಂಬವನ್ನೆ ಒಡೆಯಲು ಆರಂಭಿಸಿದನು. ಸೋಮಣ್ಣ ರಾಮಯ್ಯನಲ್ಲಿಗೆ ಬಂದು ಎಲ್ಲಾ ವಿಷಯಗಳನ್ನು ತಿಳಿಸಿ, ಒಂದು ವೇಳೆ ಒಪ್ಪದಿದ್ದರೆ ಕೊಂದು ಬಿಡುವುದಾಗಿ ಹೆದರಿಸಿದ್ದರು. ಆದರೆ ರಾಮಯ್ಯ ಇದಕ್ಕೆಲ್ಲಾ ಹೆದರಿ ಎರಡು ದಿನಗಳ ಸಮಯ ತೆಗೆದುಕೊಂಡು ಆ ಮಧ್ಯೆ ತನ್ನ ಮಗಳು ಪಾರ್ವತಿಯನ್ನು ಅವಳು ಪ್ರೀತಿಸಿದ ನಾಗನ ಜೊತೆಗೆ ಕಳುಹಿಸಬೇಕೆಂದು ತೀರ್ಮಾನಿಸಿ ಆ ದಿನ ರಾತ್ರಿ ಅವರಿಬ್ಬರನ್ನು ಯಾರಿಗೂ ತಿಳಿಯದಂತೆ ಕಳುಹಿಸಿದನು. ಆದರೆ ಇದನ್ನು ತಿಳಿದ ಸೋಮಣ್ಣ ಕಾಡಿನಲ್ಲಿ ಅವರಿಬ್ಬರನ್ನು ಹಿಡಿದು ನಾಗನನ್ನು ಕೊಂದು ಪಾರ್ವತಿಯನ್ನು ಚಿನ್ನಮ್ಮನಿಗೆ ಒಪ್ಪಿಸಿದನು.

'ಮಸಣದ ಹೂವು' ಕಾದಂಬರಿಯಲ್ಲಿ ಇಡೀ ವೇಶ್ಯಾವಾಟಿಕೆಯ ಅಡ್ಡೆಯೇ ಒಂದು ಕುಟುಂಬವಾಗಿ ಪರಿವರ್ತನೆಯಾಗಿತ್ತು. ಏಕೆಂದರೆ ದಿನ ಹತ್ತಾರು ಮಂದಿ ತಮ್ಮ ಕಾಮತೃಷೆಯನ್ನು ತೀರಿಸಿಕೊಳ್ಳಲು ಚಿನ್ನಮ್ಮನ ವೇಶ್ಯಾವಾಟಿಕೆ ಅಡ್ಡೆಗೆ ಬಂದು ತಮ್ಮ ಚಟ ತೀರಿಸಿಕೊಂಡು ಹೋಗುತ್ತಿದ್ದರು. ಆದರೆ ಆ ನೋವಿನ ಕೂಪದಲ್ಲೂ ದೇಹ ಮರಗಟ್ಟು ಹೋಗಿ ಸುಸ್ತಾದ ಬಳಿಕ ತಮ್ಮ ಕೆಲಸ ಮುಗಿಸಿ ಹೊರಬರುತ್ತಿದ್ದರು. ಅಲ್ಲಿದ್ದ ವೇಶ್ಯೆಯರಿಗೆಲ್ಲಾ ಜೀವನದಲ್ಲಿ ಒಂದಲ್ಲ ಒಂದು ರೀತಿಯ ಕಷ್ಟಗಳು ಒದಗಿ ಆ ಕಷ್ಟಗಳಿಗೆ ಏನೇ ಕೆಲಸ ಮಾಡಿದರೂ ತಮ್ಮ ಬಡತನವನ್ನು ನಿವಾರಿಸಿಕೊಳ್ಳಲು ಆಗುತ್ತಿರಲಿಲ್ಲ. ಹಸಿವು, ಬಡತನ, ನಿರುದ್ಯೋಗ ಮುಂತಾದ ಹಲವು ಸಮಸ್ಯೆಗಳಿಂದ ನಿತ್ಯವೂ ಬೆಂದು ಹೋಗಿದ್ದ ಆ ಹೆಣ್ಣು ಮಕ್ಕಳು ಮಡಿವಂತಿಕೆಯಾಗಿರಲು ಈ ಬಡತನವು ಬಿಡುತ್ತಿಲ್ಲ. ಆದ್ದರಿಂದ ತಮ್ಮ ಮೈಮಾರಿ ಹಣಗಳಿಸಿ ತಮ್ಮ ಜೀವನದ ಬಂಡಿಯನ್ನು ಎಳೆಯಲು ಇಲ್ಲಿಗೆ ಬಂದು ಸೇರಿದ್ದರು. ಕೆಲವರು ಅವರಾಗಿಯೇ ಬಂದು ಸೇರಿದ್ದರೆ, ಇನ್ನೂ ಕೆಲವರನ್ನು ಬಲವಂತವಾಗಿ ಈ ದಂಧೆಗೆ ನೂಕಲಾಗಿತ್ತು.

ಅಲ್ಲಿ ಎಲ್ಲಾ ಹೆಣ್ಣು ಮಕ್ಕಳು ತಮ್ಮದೇ ಒಂದು ಪರಿವಾರವನ್ನು ಸೃಷ್ಟಿಸಿಕೊಂಡು ಕುಟುಂಬವಾಗಿ ಬದುಕತೊಡಗಿದರು. ಅಲ್ಲಿ ಎಷ್ಟೇ ವ್ಯಾವಹಾರಿಕವಾದ ಕೆಲಸಗಳು ಜರುಗುತ್ತಿದ್ದರೂ ತಮ್ಮ ತಮ್ಮಲ್ಲೆ ಅಕ್ಕ-ತಂಗಿ

ಎಂಬ ಸಂಬಂಧಗಳ ಮೂಲಕ ಅದು ಕೌಟುಂಬಿಕ ವ್ಯವಸ್ಥೆಯಾಗಿ ಪರಿವರ್ತನೆಗೊಂಡಿತ್ತು. ವೇಶ್ಯಾವಾಟಿಕೆ ಸಮಾಜಕ್ಕೆ ಮಾರಕವಾದರೂ, ಅದರ ಸಾಧಕ-ಬಾಧಕಗಳು ಏನೇ ಇದ್ದರೂ ಸಂಬಂಧಗಳಿಗೆ ಅಲ್ಲಿ ಬೆಲೆ ಇತ್ತು. ಸಾಮಾಜಿಕ ಸಂರಚನೆಯಲ್ಲಿ ಕುಟುಂಬ ವ್ಯವಸ್ಥೆ ಬಹಳ ಮುಖ್ಯವಾದ ಪಾತ್ರ ವಹಿಸುವುದರಿಂದ ಚಿನ್ನಮ್ಮನ ವೇಶ್ಯಾವಾಟಿಕೆಯ ಅಡ್ಡ ಸಾಮಾಜಿಕವಾಗಿ ಮಡಿವಂತಿಕೆ ಕುಟುಂಬಗಳಿಗೆ ಅಸಹ್ಯ ಹುಟ್ಟಿಸುವಂಥ ವಿಷಯವಾಗಿದ್ದರೂ ಕೂಡಾ ಅಲ್ಲೂ ಕೌಟುಂಬಿಕವಾದ ಕೆಲವು ಸಂಬಂಧಗಳು ಬೆಸೆದಿದ್ದವು. ಒಬ್ಬರ ಕಷ್ಟಕ್ಕೆ ಇನ್ನೊಬ್ಬರು ಧಾವಿಸುವುದು, ಹಣಕಾಸಿನ ಸಹಾಯ ಮಾಡುವುದು ಮುಂತಾದ ಹಲವು ಸಹಾಯಗಳನ್ನು ಕುಟುಂಬದ ಸದಸ್ಯರಂತೆಯೇ ಮಾಡುತ್ತಿದ್ದರು. ಅಲ್ಲಿ ಅನೌಪಚಾರಿಕವಾದ ಒಂದು ಕುಟುಂಬ ವ್ಯವಸ್ಥೆಯು ನಿರ್ಮಾಣವಾಗಿತ್ತು.

ಸಿಂಗಾರುವಿನ ಜೀವನದಲ್ಲೂ ತಾನೊಬ್ಬ ಸಂಸಾರಿಯಾಗಬೇಕೆಂಬ ಬಯಕೆ ಇತ್ತು. ತನಗೂ ಮನೆ-ಹೆಂಡತಿ-ಮಕ್ಕಳು ಹೀಗೆ ತುಂಬು ಕುಟುಂಬದ ಜೊತೆಗೆ ಜೀವನವನ್ನು ಸಾಗಿಸಬೇಕೆಂಬ ಆಸೆ ಬಹುದಿನಗಳಿಂದಲೂ ಇತ್ತು. ಏಕೆಂದರೆ ತನ್ನ ಸಾಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದ ಹೆಣ್ಣು ಮಕ್ಕಳು ಮದುವೆ ಮಾಡಿಕೊಂಡು ಸಂಸಾರ ಜೀವನದಲ್ಲಿ ಭಾಗಿಯಾಗಿ, ಕುಟುಂಬದಲ್ಲಿನ ಹಲವು ಸುಖ-ದುಃಖಗಳನ್ನು ಇವನಿಗೆ ವಿವರಿಸುತ್ತಿದ್ದರು. ಹಾಗಾಗಿ ಸಿಂಗಾರುವೇಲುವಿಗೂ ಬದುಕನ್ನು ಸಾರ್ಥಕ ಮಾಡಿಕೊಳ್ಳಲು ತನಗೊಬ್ಬ ಸಂಗಾತಿ ಬೇಕೆಂದು ಬಯಸಿದ್ದ. ಅದಕ್ಕಾಗಿ ತಾನು ಸಾಮಿಲ್‌ನಲ್ಲಿ ಕೆಲಸ ಮಾಡಿಕೊಂಡು ಮುಂದೊಂದು ದಿನ ತಾನು ಸಂಸಾರಿಯಾಗಬೇಕೆಂಬ ದೃಢ ನಿಶ್ಚಯವನ್ನು ಮಾಡಿದ್ದ. ಆದರೆ ಸಾಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದಾಗ ತನ್ನ ಎಡಗೈಯನ್ನು ಯಂತ್ರಕ್ಕೆ ನೀಡಿ ಕೈ ಕಳೆದುಕೊಂಡು ತನ್ನ ಸಂಸಾರ ಜೀವನದ ಆಸೆಯನ್ನು ಕೈಬಿಟ್ಟ.

'ಮಸಣದ ಹೂವು' ಕಾದಂಬರಿಯಲ್ಲಿ ಔಪಚಾರಿಕವಾದ ಕೌಟುಂಬಿಕ ವ್ಯವಸ್ಥೆಯನ್ನು ಕಾಣದಿದ್ದರೂ ಕೂಡಾ ಬದುಕಿನಲ್ಲಿ ಅಂಥ ಜೀವನಕ್ಕೆ ಕಾಲಿಡಬೇಕೆಂಬ ಅದಮ್ಯ ಆಸೆಯನ್ನು ಇಟ್ಟುಕೊಂಡಿರುವ ಪಾತ್ರಗಳ ಮೂಲಕ ಕಾದಂಬರಿಯು ಗಮನ ಸೆಳೆಯುತ್ತದೆ.

# ಅಧ್ಯಾಯ-6

## ಕನ್ನಡ ಕಾದಂಬರಿ ಲೋಕಕ್ಕೆ ತ.ರಾ.ಸು. ರವರ ಕೊಡುಗೆ

ಪ್ರಗತಿಶೀಲ ಸಾಹಿತ್ಯಕ್ಕೆ ತನ್ನದೇ ಆದ ಒಂದು ಮಹತ್ವವಿದೆ. ಏಕೆಂದರೆ 1940 ರ ದಶಕದಲ್ಲಿ ಪ್ರಗತಿಗೆ ಬಂದರೂ ಕೂಡಾ ಅದು ತನ್ನದೇ ಆದ ಓದುಗ ವರ್ಗವನ್ನು ಸೃಷ್ಟಿಸಿಕೊಂಡಿತ್ತು. ಸಮಾಜದ ಹಲವು ವಿಷಯಗಳ ಪ್ರತಿಬಿಂಬದಂತೆ ಪ್ರಗತಿಶೀಲ ಸಾಹಿತ್ಯ ಕಾಣಿಸಿಕೊಂಡಿತು. ಏಕೆಂದರೆ ಇಲ್ಲಿಯವರೆಗೆ ಬರೀ ವರ್ಣನೆ ಹೊಗಳಿಕೆಗಳಲ್ಲೆ ಸಾಗಿದ್ದ ಕನ್ನಡ ಸಾಹಿತ್ಯವು ವಾಸ್ತವವಾಗಿ ಸಮಾಜದಲ್ಲಿ ಇರುವ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯವನ್ನು ಮಾಡಿದವು. ಪ್ರಗತಿಶೀಲ ಸಾಹಿತ್ಯ ಪ್ರಕಾರದಲ್ಲೆ ತುಂಬಾ ಪರಿಣಾಮಕಾರಿಯಾದುದು ಕಾದಂಬರಿ ಪ್ರಕಾರ. ಈ ಕಾದಂಬರಿಗಳಲ್ಲೆ ಸಮಾಜದ ಹಲವು ಸಮಸ್ಯೆಗಳನ್ನು ಹೇಳುವಂತಹ ಕಾರ್ಯ ನಡೆಯಿತು. ಪ್ರಗತಿಶೀಲ ಸಾಹಿತ್ಯವು ಸಮಸ್ಯೆಗಳನ್ನು ಒತ್ತಿ ಹೇಳಿತೇ ವಿನಃ ಅದಕ್ಕೆ ಪರಿಹಾರವನ್ನು ಸೂಚಿಸುವ ಕಾರ್ಯವನ್ನು ಮಾಡಲಿಲ್ಲವೆಂಬ ಅಪವಾದ ಇದ್ದರೂ, ಆಗ ತಾನೇ ಪ್ರಸಿದ್ಧಿಗೆ ಬಂದ ಒಂದು ಸಾಹಿತ್ಯ ಪ್ರಕಾರ ಸಾಮಾಜಿಕ ಸಮಸ್ಯೆಗಳ ಬಗ್ಗೆ ತಮ್ಮ ಕಾದಂಬರಿಗಳ ಮೂಲಕ ಸಂಚಲನವನ್ನು ಉಂಟು ಮಾಡಿದ್ದಂತು ಸುಳ್ಳಲ್ಲ.

ಅದರಲ್ಲಿ ತ.ರಾ.ಸು. ರವರು ಕಾದಂಬರಿ ಲೋಕಕ್ಕೆ ನೀಡಿದ ಕೊಡುಗೆಗಳನ್ನು ಗಮನಿಸುತ್ತಾ ಹೋದರೆ ಅವರು ಭಿನ್ನ ಸಂಸ್ಕೃತಿಯಲ್ಲಿ ಬೆಳೆದವರು. ಅವರ ವ್ಯಕ್ತಿತ್ವ ಹೇಳುವ ಹಾಗೆಯೇ ಅವರು ಪ್ರತಿಭಟನಾ ಪ್ರವೃತ್ತಿವುಳ್ಳವರು. ಚಿಕ್ಕಂದಿನಲ್ಲಿಯೇ ಟಿ.ಎಸ್. ವೆಂಕಣಯ್ಯರ ಮುಂದೆ ಕಾದಂಬರಿ ರಚಿಸುವುದರ ಕುರಿತು ಅವರಿಂದ ಸವಾಲನ್ನು ಸ್ವೀಕರಿಸಿ ಗೆದ್ದವರು. ತ.ರಾ.ಸು. ಅವರಿಗೆ ಸಾಮಾಜಿಕ ಸಮಸ್ಯೆಗಳು ಅವರ ಮೇಲೆ ಗಾಢವಾದ ಪರಿಣಾಮವನ್ನು ಬೀರಿದ್ದವು. ಹಸಿವು, ಬಡತನ, ನಿರುದ್ಯೋಗ, ಮೂಢನಂಬಿಕೆಗಳು, ಧಾರ್ಮಿಕ ಕಂದಾಚಾರಗಳು, ಲಿಂಗ ಅಸಮಾನತೆ, ಪುರುಷ ಪ್ರಧಾನ ವ್ಯವಸ್ಥೆ ಮುಂತಾದ ಸೂಕ್ಷ್ಮ ವಿಷಯಗಳು ಅವರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ ಆ ಸಮಸ್ಯೆಗಳೇ ಮುಂದೆ ತಮ್ಮ ಸಾಮಾಜಿಕ ಕಾದಂಬರಿಗಳ ಕಥಾವಸ್ತುವಾದವು. ಆ ಮೂಲಕ ಕಾದಂಬರಿಗಳಲ್ಲಿ ಈ ಸಮಸ್ಯೆಗಳನ್ನು ಹಲವು ಪಾತ್ರಗಳ ಮೂಲಕ ಚಿತ್ರಿಸುವುದರ ಮುಖಾಂತರ ಒಂದು ಸಾಮಾಜಿಕ ಜಾಗೃತಿಗೆ ನಾಂದಿ ಹಾಡಿದರು.

ತ.ರಾ.ಸು.ರವರ ತಮ್ಮ ಕಾದಂಬರಿಗಳಲ್ಲಿ ಕನ್ನಡ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ತಂತ್ರ ವೈವಿಧ್ಯದಿಂದ, ವಸ್ತು ವೈವಿಧ್ಯದಿಂದ ಹಾಗೂ ಪಾತ್ರಗಳ ವೈವಿಧ್ಯದಿಂದ ಅವರ ಕಾದಂಬರಿಗಳು ಸಹೃದಯರ ಮನಸ್ಸನ್ನು ಸೂರೆಗೊಳ್ಳುತ್ತದೆ ಹಲವು ಲೇಖಕರು ಸಾಮಾಜಿಕ ಕಾದಂಬರಿಗಳನ್ನು ರಚಿಸಿದ್ದರೂ ಪ್ರತಿಯೊಬ್ಬ ಲೇಖಕನ ಭಾಷೆ, ಅಭಿವ್ಯಕ್ತಿ ಭಿನ್ನವಾಗಿರುತ್ತದೆ. ವಸ್ತು ಒಂದೇ ಆದರೂ ಭಾವನೆಗಳು ಬೇರೆ ಬೇರೆಯಾಗಿರುತ್ತದೆ. ಸಾಮಾಜಿಕ ಕಾದಂಬರಿಗಳಲ್ಲಿ ಬರುವ

ಒಂದಲ್ಲ ಒಂದು ಪಾತ್ರವು ನಮ್ಮ ಸುತ್ತಮುತ್ತಲಿನ ಯಾವುದಾದರೂ ಒಂದು ಪಾತ್ರವನ್ನು ಹೋಲುತ್ತಿರುತ್ತವೆ. ಪ್ರತಿಯೊಬ್ಬ ಲೇಖಕರ ನಿರೂಪಣಾಧಾಟಿ ವಿಭಿನ್ನವೂ, ವೈಶಿಷ್ಟ್ಯಪೂರ್ಣವೂ ಆಗುವುದಕ್ಕೆ ಅದರದೇ ಆದ ಭಾಷೆ-ಅಭಿವ್ಯಕ್ತಿಯೇ ಕಾರಣ. "ಸಾಮಾಜಿಕ ಕಾದಂಬರಿಗಳನ್ನು ತ.ರಾ.ಸು. ರಚಿಸುವಾಗ ಮಧ್ಯಮ ವರ್ಗದ ಕುಟುಂಬದಲ್ಲಿ ನಡೆಯುತ್ತಿದ್ದ ವಿಷಯಗಳನ್ನೇ ತನ್ನ ಕಥಾವಸ್ತುವಾಗಿ ಆಯ್ಕೆ ಮಾಡುತ್ತಿದುದು ಅವರ ಪ್ರತಿಭಟನಾ ಧೋರಣೆಗೆ ಹಿಡಿದ ಕೈಗನ್ನಡಿ.

ನಾ. ಪ್ರಭಾಕರ್ ರವರು "ಆಗಿನ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ನೈತಿಕ ವ್ಯವಹಾರ ಸಂಪ್ರದಾಯಗಳನ್ನು, ಜನರ ವೇಷಭೂಷಣ, ಆಚಾರ-ವಿಚಾರ, ಜೀವಾನುಭವ, ಅಭಿರುಚಿ-ಸಂಸ್ಕಾರಾಭಿರುಚಿಗಳನ್ನು, ಆ ಯುಗದ ಮನೋಧರ್ಮ ನಡವಳಿಗಳನ್ನು ಪ್ರಾಕೃತಿಕ ಹಾಗೂ ಭೌಗೋಳಿಕ ಸನ್ನಿವೇಶ ವಾತಾವರಣಗಳನ್ನು ಅರಿತುಕೊಂಡು ತನ್ನ ಪ್ರತಿಭಾ ಶಕ್ತಿಯಿಂದ ಕಲ್ಪನಾ ಜ್ಯೋತಿಯನ್ನು ಹರಿಸುವುದು, ಅವರು ರಚಿಸಿದ ಕಾದಂಬರಿಗಳಲ್ಲಿ ಗುಣಾತಿಶಯವು ತಲೆದೋರಿದೆ ಹಾಗೂ ಕಾದಂಬರಿಯ ನಿರೂಪಣೆಯಲ್ಲಿ ಅದ್ಭುತ ಕಥಾ ಶಿಲ್ಪ ಎದ್ದು ಕಾಣುತ್ತದೆ" ಎಂದು ತ.ರಾ.ಸು. ರವರ ಗುಣಗಾನ ಮಾಡಿದ್ದಾರೆ.

ಸಾಮಾಜಿಕ ಕಾದಂಬರಿಗಳ ಬರವಣಿಗೆಯಲ್ಲಿ ತಮ್ಮದೇ ಕೃಷಿಯನ್ನು ಮಾಡಿದವರು ತ.ರಾ.ಸು. ಆರಂಭದ ಕೃತಿಗಳಲ್ಲಿ ಅ.ನ.ಕೃ. ಅವರ ಪ್ರಭಾವ ಕಂಡು ಬಂದರೂ, ಅ.ನ.ಕೃ. ಶೈಲಿಯಲ್ಲಿ ಅನಂತರದ ಬೆಳವಣಿಗೆಯಲ್ಲಿ ವಸ್ತು ಒಂದೆ ಆದರೂ ನಿರೂಪಣಾ ಧಾಟಿ ವಿಭಿನ್ನವೂ, ಭಾಷಾಶೈಲಿ ವೈಶಿಷ್ಟ್ಯ ಪೂರ್ಣವೂ ಆಗಿದ್ದಲ್ಲದೇ, ಇದು ತ.ರಾ.ಸು. ಅವರದೇ ಬರವಣಿಗೆಯೆಂದು ಖಚಿತವಾಗಿ ಗುರುತಿಸಲು ಸಾಧ್ಯವಾಗುವಷ್ಟು ಮಟ್ಟಿಗೆ ಅವರ ವಿಶಿಷ್ಟತೆ ಅವರ ಕಾದಂಬರಿಗಳಲ್ಲಿ ಕಾಣಸಿಗುತ್ತದೆ. ಭಾಷೆಯಲ್ಲಿ ಗಾರುಡಿಗತನವಿದೆ. ಸನ್ನಿವೇಶಗಳನ್ನು ರಸೋಜ್ವಲವಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸಬಲ್ಲ ಶಕ್ತಿ ಅವರ ಕಾದಂಬರಿಗಳಿಗಿವೆ. ಪಾತ್ರಗಳ ಅಂತರಂಗವನ್ನು ಪ್ರವೇಶಿಸಿ ಅಲ್ಲಿನ ಸೂಕ್ಷ್ಮ ಸಂವೇದನೆಗಳನ್ನು ಅರಿತು ಅರಗಿಸಿಕೊಂಡು ಅವುಗಳನ್ನು ಮರಳಿ ವಿವರ-ವಿವರವಾಗಿ ಚಿತ್ರಿಸಬಲ್ಲ ಕೌಶಲ್ಯವೂ ಇದೆ.

"ತಮ್ಮ ಗುರು ಅ.ನ.ಕೃ ಅವರಂತೆ ತ.ರಾ.ಸು. ಅವರು ಸಹ ವಾಕ್ ಕಲಾಕೋವಿದರು. ಯಾವ ವಿಷಯವನ್ನಾವರಿಸಿಕೊಂಡರೂ ಅವರ ವಾಕ್ ಪ್ರಹಾರ ನಿರರ್ಗಳವಾಗಿ ಸಾಗುತ್ತದೆ. ಅವರೆಂದೂ ಪದಗಳಿಗೆ ತಡವರಿಸಿದವರಲ್ಲ. ವಾಕ್ಯ ರಚನೆಯಲ್ಲಿ ಮುಗ್ಗರಿಸದವರಲ್ಲ. ಆಲೋಚನೆಗಾಗಿ ಛಾವಣಿಯ ಕಡೆಗೆ ಕಣ್ಣು ಹಾಯಿಸಿದವರಲ್ಲ. ಭಾಷಣ ಪ್ರಾರಂಭಿಸಿದ ನಾಲ್ಕೈದು ನಿಮಿಷಗಳಲ್ಲಿ ತ.ರಾ.ಸು. ಮರೆಯಾಗಿ ವಿಷಯಕ್ಕೆ ಬಾಯಿ ಬಂದಂತೆ, ಮಾತೆಲ್ಲವೂ ವಿಷಯವಾದಂತೆ. ಅವರ ಇಡೀ ವ್ಯಕ್ತಿತ್ವವೇ ಮಾತಾಡುತ್ತಿದ್ದಂತೆ ಭಾಸವಾಗುತ್ತದೆ. ಶ್ರೋತೃಗಳ ಮನಸ್ಸನ್ನೆಲ್ಲಾ ಆಕ್ರಮಿಸಿಕೊಳ್ಳುವ, ಮಾತಿನ ಸಮ್ಮೋಹನಾಸ್ತ್ರದಲ್ಲಿ ಅವರನ್ನು ಮೈಮರೆಸುವ, ಮಾತಿನ ವಿಮಾನದಲ್ಲಿ ಅವರನ್ನು ತಮ್ಮನ್ನು ಬೇರೊಂದು ಪ್ರಪಂಚಕ್ಕೆ ಕೊಂಡೊಯ್ಯುವ ಅಸಾಧಾರಣ ಗಾರುಡಿಗರವರು. ಕನ್ನಡ ಕಳಪೆಯಲ್ಲ, ಸತ್ವಹೀನವಾದುದಲ್ಲ, ಸರ್ವಸಮರ್ಥ ಗಂಡು

ಭಾಷೆಯಂಬ ಭಾವನೆ ಅವರ ಬಾಹ್ಯತೆಯಿಂದ ಅಭಿವ್ಯಕ್ತವಾಗುತ್ತದೆ" ಎನ್ನುತ್ತಾರೆ. ಅವರನ್ನು ತುಂಬಾ ಹತ್ತಿರದಿಂದ ಬಲ್ಲ ದೇ.ಜವರೇಗೌಡರು.

ತ.ರಾ.ಸು. ಅವರದು ಸರಳ ಸುಂದರ ಶೈಲಿ. ಶೈಲಿಯ ಭಾಷೆಯ ಲಕ್ಷಣ. ಅದು ಕಥೆ ಹೇಳುವವನ ವ್ಯಕ್ತಿತ್ವವನ್ನು ಪ್ರಕಟಿಸುತ್ತದೆ. ಅವರ ಅಪಾರ, ಜ್ಞಾನ, ಪಾಂಡಿತ್ಯ ಹಾಗೂ ಜೀವನದ ಬಗ್ಗೆ ಅವನ ಕಲ್ಪನೆಗಳು ಅವನ ಶೈಲಿಯಲ್ಲಿ ಪ್ರಕಟವಾಗುತ್ತದೆ. ಅವರ ಕಾದಂಬರಿಯ ಪಾತ್ರಗಳ ಬಗೆಗೆ ಬರೆಯುತ್ತ ಡಾ॥ ಹಾ. ಮಾ. ನಾಯಕರು ಹೇಳುವ ಮಾತು ಅರ್ಥಪೂರ್ಣವಾಗಿದೆ. "ತ.ರಾ.ಸು. ಕಡೆಯುವ ಪಾತ್ರಗಳು ಯಾವಾಗಲೂ ಜೀವಂತವಾಗಿ ಇರುತ್ತವೆ. ಗತಕಾಲಕ್ಕೆ ಹೋಗಿ ಅಲ್ಲಿನ ಪಾತ್ರಗಳನ್ನು ಕಲ್ಪಿಸಬೇಕಾಗಿ ಬಂದಾಗಲೂ ಅವರು ಅದಕ್ಕೆ ರಕ್ತಮಾಂಸಗಳನ್ನು ತುಂಬಬಲ್ಲರು. ಅವರ ಶೈಲಿ ಶಕ್ತಿ ಪೂರ್ಣವೂ ಆದದ್ದು, ಆದರೆ ಒಮ್ಮೊಮ್ಮೆ ಅತಿ ಎನಿಸುವ ಮಟ್ಟಿಗೆ ಅದು ಭಾರಗೊಳ್ಳುವುದೂ ಉಂಟು. ಎಷ್ಟೋ ವೇಳೆ ಅವರು ಬಣ್ಣದ ಮೇಲೆ ಬಣ್ಣ ಬಳಿದ ಹಾಗೆ ಬಣ್ಣಿಸುತ್ತಾರೆ. ಅನುಕಂಪೆಯನ್ನು ಅವರು ಅದ್ಭುತವಾಗಿ ತರಬಲ್ಲರು" ಎನ್ನುತ್ತಾರೆ. ಅವರ ಕಾದಂಬರಿಗಳಲ್ಲಿ ಬಿರುಗಾಳಿಯ ವೇಗದಲ್ಲಿ ಓಡುವ ಓಜಸ್ವಿ ಶೈಲಿಯಿದೆ. ಸಹಜ ಸಜೀವ ಪರಿಸರ ದೃಷ್ಟಿ, ಸದೃಢ ಪಾತ್ರ ಕಲ್ಪನೆ ಮತ್ತು ಅಭ್ಯಾಸ ಪೂರ್ಣವಾದ ವೈಚಾರಿಕತೆ ಇವು ತ.ರಾ.ಸು. ಕಾದಂಬರಿಗಳ ಪ್ರಧಾನ ಲಕ್ಷಣಗಳಾಗಿವೆ.

ಸಾವಿರಾರು ಗ್ರಂಥಗಳನ್ನು ಓದಿ ಅರಗಿಸಿಕೊಂಡ ಅಧ್ಯಯನ ಶೀಲರು ವಿಷಯ ಅಲ್ಪವಾದರೂ ಭಾಷೆಯ ಕಟ್ಟಡದಲ್ಲಿ ಭಯವಾಗಿಸುವ ಕಲೆ ಇವರದು ಚಿತ್ರಮಯವಾದ ಭಾಷೆ. ಕಣ್ಣಿಗೆ ಕಟ್ಟುವಂತೆ ನೋಟವನ್ನಾಗಲಿ, ಚಿತ್ರವನ್ನಾಗಲಿ, ವ್ಯಕ್ತಿಯನ್ನಾಗಲಿ, ಚಿತ್ರಿಸಬಲ್ಲರು. ತ.ರಾ.ಸು. ಅವರು ಕಾದಂಬರಿ ರಚನೆಯಲ್ಲಿ ಸಾಧಿಸಿದ ಸಿದ್ಧಿ–ಸಾಧನೆಗಳನ್ನು ಎಚ್.ಜೆ. ಲಕ್ಕಪ್ಪಗೌಡರು ಹೀಗೆ ಗುರುತಿಸುತ್ತಾರೆ.

"ಅ.ನ.ಕೃ ಅವರ ಗರಡಿಯಲ್ಲೆ ಸಾಮು ಮಾಡಿ ಅಧಿಕ ಜನಪ್ರಿಯತೆಯನ್ನು ಗಳಿಸಿದ ಮತ್ತೊಬ್ಬ ಪ್ರಸಿದ್ಧ ಕಾದಂಬರಿಕರಾರರೆಂದರೆ ತ.ರಾ.ಸು. ಅವರು. ಆದರೆ ಬಹುಬೇಗ ಗುರುವನ್ನು ಹಿಂದೆ ಹಾಕಿ ಮಿಂಚಿನಂತೆ ಮುನ್ನಡೆದರು. ಮೊದ ಮೊದಲಿನ ಕಾದಂಬರಿಗಳಲ್ಲಿ ಅಸಹಜ, ಆದರ್ಶವಾದ, ಸತ್ವರಹಿತ ಸುಧಾರಣೋತ್ಸಾಹ, ಅತಿಯಾದ ಭಾವನಾವಶತೆಗಳ ಅ.ನ.ಕೃ. ಅಚ್ಚು ಕಣ್ಣಿಗೆ ಬಡಿಯುವಂತೆ ಕಾಣಿಸಿಕೊಳ್ಳುತ್ತದೆಯಾದರೂ ಕಾಲ ಸರಿದಂತೆ ತಮ್ಮದೇ ಆದ ವ್ಯಕ್ತಿತ್ವವನ್ನೂ, ಶೈಲಿಯನ್ನೂ ನಿರೂಪಣ ನಾವೀನ್ಯತೆಯನ್ನು ಅವರು ರೂಪಿಸಿಕೊಂಡರು. ಕಾದಂಬರಿ ಪ್ರಪಂಚದ ನವದಿಗಂತಗಳ ಅನ್ವೇಷಣೆ ಮಾಡಿದರು. ಸಮಕಾಲೀನ ಸಮಾಜದ ವಿವಿಧ ಮುಖಗಳ ಅನಾವರಣ ಮಾಡಿದ್ದಲ್ಲದೇ ಪುರಾಣ ಇತಿಹಾಸಗಳ ಆಳಕ್ಕೂ ಇಳಿದು ಶ್ರದ್ಧೆಯಿಂದ ಅಭ್ಯಸಿಸಿ ಅವುಗಳನ್ನು ತಮ್ಮ ಲೇಖನಿಯಿಂದ ಪುನಃ ಸೃಷ್ಟಿಸಿದರು. ಪ್ರಯೋಗ ಪ್ರಿಯತೆ ತ.ರಾ.ಸು. ಅವರ ರಕ್ತಗುಣ ಅವರ ಕೃತಿಗಳಲ್ಲಿ ವಿಪುಲವಾದ ಕಥೆ

ವೈವಿಧ್ಯವಿರುವಂತೆಯೇ ತಂತ್ರ ವೈವಿಧ್ಯವೂ ಇದೆ. ಓದುಗರನ್ನು ಉಸಿರು ಕಟ್ಟಿಸುವಂಥ ಓಟದಲ್ಲಿ ಕಥೆ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ".

ಕಣ್ಣಿಗೆ ಕಟ್ಟಿದಂತೆ ವರ್ಣಿಸುವ ತ.ರಾ.ಸು. ಅವರ ಶಬ್ಧ ಚಿತ್ರಗಳು ಮೂರ್ತಿಶಿಲ್ಪಗಳಾಗಿ ಓದುಗರ ಮನೋಮಂದಿರದಲ್ಲಿ ಅಚ್ಚೊತ್ತುತ್ತವೆ. ಅಪಾರವಾದ ಪದಸಂಪತ್ತು ಇವರದು. ಕಲ್ಪನೆಯ ಚಟುವಟಿಕೆ ಬಲು ಹೆಚ್ಚು. ವಾಕ್ಯ ಸರಣಿಯ ಓಟ, ಅತಿ ವೇಗ, ಇವರಿಗೆ ವಸ್ತುವಿಗಿಂತ ಶೈಲಿ ಎಂದಿಗೂ ಕೀಳಲ್ಲ. ಎರಡಕ್ಕೂ ಚಿತ್ತವನ್ನು ಸರಿಸಮವಾಗಿಯೇ ಕೊಡುತ್ತಾರೆ. ಒಂದು ನಿರ್ಧಿಷ್ಟ ಅವಧಿಯಲ್ಲಿ ಒಂದು ಇಡೀ ಪಂಗಡದ ಕಷ್ಟ ಕಾರ್ಪಣ್ಯ ಕುದಿಗಳನ್ನು ಸ್ಪಷ್ಟವಾಗಿ ಚಿತ್ರಿಸಬಲ್ಲರು.

"ಒಬ್ಬ ಲೇಖಕ ಆಯ್ದುಕೊಳ್ಳುವ ವಸ್ತು, ಶೈಲಿ, ಪಾತ್ರ ಮುಂತಾದವುಗಳಲ್ಲಿ ಅವನ ಜೀವನ ದೃಷ್ಟಿ ವ್ಯಕ್ತವಾಗಿರುತ್ತದೆ. ಈ ಮಾತು ಎಲ್ಲಾ ಲೇಖಕನಿಗೂ ಅನ್ವಯವಾಗುತ್ತದೆ. ಇದಕ್ಕೆ ತ.ರಾ.ಸು. ಹೊರತಲ್ಲ. ತ.ರಾ.ಸು ಅವರ ಪಾತ್ರ ಚಿತ್ರಣವನ್ನು ನೋಡಬೇಕು. ಪಾತ್ರ ಒಳಹೊರಗುಗಳೆರಡನ್ನು ಚಿತ್ರಿಸುವಲ್ಲಿ ಬಾಹ್ಯ ಮತ್ತು ಆಂತರ್ಯದ ಅರಿವು ಓದುಗನಿಗೆ ಸ್ಪಷ್ಟವಾಗಿ ಇಡೀ ಪಾತ್ರ ಅನನ್ಯತೆ ಕಣ್ಣ ಮುಂದೆ ನಿಂತಂತಾಗುತ್ತದೆ. ಶಿಲ್ಪಿ ಕಡೆದ ವಿಗ್ರಹದಂತಹ ಅಚ್ಚುಕಟ್ಟುತನ ಅವರಲ್ಲಿ ಕಂಡುಬರುತ್ತದೆ". ಸಿಡಿಲ ಮೊಗ್ಗುವಿನಲ್ಲಿ ಮೂಡಿಸಿರುವ ಶಾಂತಲೆಯ ಚಿತ್ರವನ್ನು 'ಮಸಣದ ಹೂವು' ಕಾದಂಬರಿಯಲ್ಲಿ ಪಾರ್ವತಿ, ಚೆನ್ನಮ್ಮ, ಸಿಂಗಾರು ಪಾತ್ರಗಳಲ್ಲಿ ಕಂಡುಬರುವ ಅಚ್ಚುಕಟ್ಟುತನವನ್ನು ಇಲ್ಲಿ ಉದಾಹರಿಸಬಹುದು.

ತ.ರಾ.ಸು. ರವರ ಯಾವುದೇ ಸನ್ನಿವೇಶವು ಕಣ್ಣಿಗೆ ಕಟ್ಟುವಂತೆ, ಆ ಉತ್ಸವದಲ್ಲಿ ನಾವು ಪಾಲ್ಗೊಂಡಂತಹ ಅನುಭವವಾಗುತ್ತವೆ. ಸಹಜ ಬೆಳವಣಿಗೆಗಿಂತ ಅವುಗಳನ್ನು ವೈಭವೀಕರಿಸುತ್ತಾ ಅವು ಜೀವಂತವಾಗಿ ನಿಲ್ಲುವಂತೆ ಮಾಡುತ್ತವೆ. ಅಲ್ಲದೆ ತ.ರಾ.ಸು. ಅವರ ಶೈಲಿ ವೈಶಿಷ್ಟ್ಯಪೂರ್ಣ, ಅವರ ಗದ್ಯ ರಸವತ್ತಾದುದು. ಅವರು ಕಾವ್ಯವನ್ನೇನೋ ರಚಿಸಲಿಲ್ಲ. ಆದರೆ ಲೀಲಾಜಾಲವಾಗಿ ಕಾವ್ಯ ಗುಣ ಅವರ ಬರವಣಿಗೆಯಲ್ಲಿ ಹಾಸು ಹೊಕ್ಕಾಗಿದೆ. ಆ ಮೂಲಕ ಅನಿವರ್ಣನೀಯ ಮೋಹಕತೆ, ಅಲ್ಲಿ ಆವರಿಸಿದೆ. ಅವರ ನಿರೂಪಣೆಯ ರೀತಿ, ಸಮಾಜವನ್ನು ನಿರೀಕ್ಷಿಸುವ ವ್ಯಕ್ತಿತ್ವ ಅಭಿವ್ಯಕ್ತಿಗೊಳಿಸುವ ಸರಣಿ ವಿಭಿನ್ನ. ನೈಜ ಪ್ರಗತಿಶೀಲ ಲೇಖಕನ ಕಲೋಪಾಸನೆಯಲ್ಲಿ ಸಂದೇಹವಿಲ್ಲ. ತ.ರಾ.ಸು. ಅಂತಹ ಸಜೀವ ಓಜಸ್ವಿ ಬರಹಗಾರರು. 'ಪ್ರಗತಿ ನಿಂತ ನೀರಲ್ಲ, ಪ್ರವಹಿಸುವ ನಿರಂತರ ಝರಿ' ಎನ್ನುವುದನ್ನು ಅವರ ಅಭಿವ್ಯಕ್ತಿಯಲ್ಲಿ ಗುರುತಿಸಬಹುದು.

ತ.ರಾ.ಸು. ಅವರ ಬರವಣಿಗೆಯ ಮುಖ್ಯ ಲಕ್ಷಣವೆಂದರೆ ಭಾವತೀವ್ರತೆ. ತ.ರಾ.ಸು. ಅವರು ತಮ್ಮ ಕೃತಿಗಳ ಪಾತ್ರಗಳಲ್ಲಿ ತಲ್ಲೀನರಾಗಿ ಬಿಡುತ್ತಾರೆ. "ಮುಂದೇನು?" ಎಂದು ವಾಚಕರು ಉಸಿರು ಹಿಡಿದು ಅವರ ಲೇಖನಿಯ ಹಿಂದೆ ಓಡುವ ಹಾಗೆ ಮಾಡುತ್ತದೆ. ಅವರ ಐತಿಹಾಸಿಕ ಕಾದಂಬರಿಗಳಂತೆ ಸಾಮಾಜಿಕ

ಕಾದಂಬರಿಗಳು ಕೂಡಾ ಆಕಳಿಸುವವರನ್ನು ಆಕರ್ಷಿಸಿ ಅವರಿಂದ ಓದಿಸಿಕೊಳ್ಳುತ್ತದೆ. ಓದುಗರನ್ನು ಆಕರ್ಷಿಸಿದ್ದು ಅವರ ಅದ್ಭುತ ಕತೆಗಾರಿಕೆ ಪಾತ್ರಗಳಿಗೆ ಜೀವ ತುಂಬಬಲ್ಲ ಶಕ್ತಿ, ಚಿತ್ರಮಯವಾದ ಶೈಲಿ, ಇವರ ಪಾತ್ರಗಳು ಜೀವಂತ ಸತ್ವದಿಂದ ತುಂಬಿದೆ. ಆದರೆ ತ.ರಾ.ಸು. ಈ ಜೀವಂತ ಸತ್ವವನ್ನು ಅತಿಶಯೋಕ್ತಿಯ ಕಾವಿನಲ್ಲಿ ಕರಗಿಸಿ ಬಿಡುತ್ತಾರೆ. ಈ ದೃಷ್ಟಿಯಿಂದ ನೋಡಿದಾಗ ಅವರ ವರ್ಣನೆಗಳು ಅಮೋಘವಾದುದು.

ತ.ರಾ.ಸು. ಅವರ ಸ್ವಾರಸ್ಯಕರವಾದ ಅಭಿವ್ಯಕ್ತಿ ಕುತೂಹಲ ಕೆರಳಿಸುತ್ತದೆ. ಅಪಾರವಾದ ಶಬ್ಧ ಸಂಪತ್ತಿದೆ. ಭಾವಗಳನ್ನು ಹೊರಸೆಳೆಯುವ ಭಾಷೆ ಇದೆ. ಕುತೂಹಲ ಸನ್ನಿವೇಶದಿಂದ ಆರಂಭವಾಗಿ ಅರಳಿಸಿಕೊಂಡು ಹೋಗುತ್ತದೆ. ಪಾತ್ರಗಳ ಚಿತ್ರಣ, ಅವುಗಳ ಮನಸ್ಸಿನ ವ್ಯಾಪಾರದ ಚಿತ್ರಣ ಮನಮುಟ್ಟುವಂತಿದೆ. ಲೀಲಾಜಾಲವಾಗಿ ಕಥಾ ನಿರೂಪಣೆಯನ್ನು ಮಾಡುತ್ತಾ ಹೋಗುತ್ತಾರೆ. ಸರಾಗವಾಗಿ ಲೇಖನಿ ಮುಂದುವರಿಯುತ್ತದೆ. ಹೆಣ್ಣನ್ನು ಚಿತ್ರಿಸುವುದರಲ್ಲಿ ತ.ರಾ.ಸು. ಅವರ ಲೇಖನಿ ಸ್ವಚ್ಛಂದವಾಗಿ ಹರಿದಿದೆ.

ಹೆಣ್ಣಿನ ನಿರ್ಮಲ ತ್ಯಾಗ, ಅಂತಃಕರಣ, ಆಕೆಯ ಅನಂತ ಸಮಸ್ಯೆಗಳ ಬಗ್ಗೆ ಅನುಕಂಪ, ಇಬ್ಬರಿಗೂ ನಡೆಯುವ ಸಂಭಾಷಣೆಗಳು ಹೃದಯ ಸ್ಪರ್ಶಿಯಾಗಿವೆ. ತ.ರಾ.ಸು ಅವರ ಸಂಭಾಷಣಾ ಶೈಲಿಯನ್ನು ಪರಿಣಾಮವಾಗಿ ಪ್ರಯೋಗಿಸಿದ್ದಾರೆ. ತಂತ್ರದಿಂದ ಓದುಗರನ್ನು ಮಂತ್ರ ಮುಗ್ಧರನ್ನಾಗಿಸುತ್ತಾರೆ. ಭಾಷೆ, ಶೈಲಿ, ತಂತ್ರ, ರಸ, ಪ್ರಯೋಗ, ಪಾತ್ರ ಚಿತ್ರಣಗಳಿಂದ ಓದುಗರಿಗೆ ಖುಷಿಪಡುತ್ತಾರೆ.

"ತ.ರಾ.ಸು. ಅವರ ಭಾಷೆ ಪಾತ್ರ ನಿಷ್ಠವಾದಂತೆ ತಂತ್ರ ನಿಷ್ಠವೂ ಆಗಿದೆ. ಅದು ಅವರ ಶೈಲಿಯ ಒಂದು ಲಕ್ಷಣವೆಂದರೂ ಸರಿಯೇ. ಕಾದಂಬರಿಯ ವಿಷಯ ಅಥವಾ ವಸ್ತುವಿಗೆ ಅನುಗುಣವಾಗಿ ಭಾಷೆಯನ್ನು ಬಳಸುತ್ತಾರೆ. "ಅವರು ತಮ್ಮ ಐತಿಹಾಸಿಕ ಕಾದಂಬರಿಗಳಲ್ಲಿ ಭಕ್ತರನ್ನು ಚಿತ್ರಿಸುವಾಗ ಅವರ ಅಭಿವ್ಯಕ್ತಿ ಭಾವುಕವಾಗುತ್ತದೆ. ತ.ರಾ.ಸು ಅವರ ಭಕ್ತರೆಲ್ಲಾ ಸಾತ್ವಿಕ ಭಕ್ತರು. ಅವರಲ್ಲಿ ಆರ್ತತೆ ಇದೆ. ಮಾರ್ದವತೆ ಇದೆ. ಧ್ವನಿ ರಮ್ಯತೆ ಇದೆ. ಆ ಯುಗದ ಮೌಲ್ಯಗಳಾದ ಧರ್ಮ, ತ್ಯಾಗ, ಸ್ವಾಮಿನಿಷ್ಠೆ ಮುಂತಾದ ವಿಚಾರಗಳನ್ನು ಇಲ್ಲೆಲ್ಲಾ ಗುರುತಿಸಬಹುದು. ದೇವರ ವಿಗ್ರಹವನ್ನು ಕಂಡು ರೋಮಾಂಚನಗೊಳ್ಳುವ, ಸ್ತೋತ್ರವನ್ನು ಪಠಿಸುವ ಹಾಗೂ ಗುರುಗಳು, ಮಠಮಾನ್ಯಗಳು, ಗುರುಗಳಿಗಿರುವ ಸ್ಥಾನ–ಮಾನಗಳು, ಜ್ಯೋತಿಷ್ಯ, ಪುರೋಹಿತ ವರ್ಗ ಇವೆಲ್ಲವನ್ನು ಚಿತ್ರಿಸುವಾಗ ಭಾಷೆಯನ್ನು ನಿರರ್ಗಳವಾಗಿ ಬಳಸಿದ್ದಾರೆ. ತ.ರಾ.ಸು. ಅವರ ಕಾದಂಬರಿಯ ಭಕ್ತರು ದೇವಿಯ ವಿಗ್ರಹವನ್ನು ಕಂಡ ಕೂಡಲೇ ದೇವಿದರ್ಶನವಾದಂತೆ ಭಾವಪರವಶರಾಗಿ ಬಿಡುತ್ತಾರೆ. ಅವರ ಬಾಯಿಂದ ದೇವಿಸ್ತೋತ್ರ ತಮಗರಿವಿಲ್ಲದಂತೆಯೇ ಹೊರ ಹೊಮ್ಮುತ್ತದೆ.

ತ.ರಾ.ಸು. ಅವರು ನಿರರ್ಗಳವಾದ ತನ್ನ ಅಭಿವ್ಯಕ್ತಿ ಸಂಪತ್ತನ್ನು ಬಹು ವ್ಯವಸ್ಥಿತವಾಗಿಯೂ, ಉದ್ಬೋಧಕವಾಗಿಯೂ ಬಳಸಿದ್ದಾರೆ. ಅವರ ನಿರೂಪಣಾ ಶಕ್ತಿ ಜಲಪಾತದ ನಿರರ್ಗಳ ಧಾರೆಯಂತೆ, ಓತಪ್ರೋತವಾಗಿ ಹರಿದು ಬರುವ ಅವರ ಶಬ್ಧ ಸಂಪತ್ತು ನಮ್ಮ ನರನಾಡಿಗಳಲ್ಲಿ ಸತತ ಭಾವೋದ್ವೇಗವನ್ನುಂಟು ಮಾಡುತ್ತವೆ. ಅವರದು ಚೇತನಾತ್ಮಕವಾದ ಬರಸಿಡಿಲು. ಅವರ ಕಥನ ಕಲೆಯ ವೈಶಿಷ್ಟವೆಂದರೆ ವಾಸ್ತವಿಕ ನಿರೂಪಣೆಯ ಹಿನ್ನೆಲೆಯಲ್ಲಿಯೇ ಓದುಗರು ಓದುತ್ತಾ ಹೋಗುವ ಹಾಗೆ ಮನಸ್ಸಿಗೆ ಸುಳಿಯಬಹುದಾದ ಸಮಸ್ಯೆಗಳನ್ನು ಊಹಿಸಿ, ತನ್ನಷ್ಟಕ್ಕೆ ಉತ್ತರಿಸುವ ಒಂದು ಅದ್ಭುತ ಜಾಣ್ಮೆಯಿದೆ. ದೈವೀ ವಿಗ್ರಹವನ್ನು, ಅದರ ಸೌಂದರ್ಯವನ್ನು ವರ್ಣಿಸುವಾಗ ಭಾಷೆಯಲ್ಲಿ ಕೆಲವೊಮ್ಮೆ ಬದಲಾವಣೆ ಮಾಡಿಕೊಂಡಿರುತ್ತಾರೆ. ಭಕ್ತನ ಅನುಭವಗಳನ್ನು ನಿರೂಪಿಸುವಾಗ ಅಭಿವ್ಯಕ್ತಿ ಭಾವುಕವಾಗುತ್ತದೆ. ಭಾವತನ್ಮಯತೆ ಹಾಗೂ ಭಾವಪರವಶತೆ ತ.ರಾ.ಸು. ಅವರ ಐತಿಹಾಸಿಕ ಹಾಗೂ ಸಾಮಾಜಿಕ ಎರಡೂ ಬಗೆಯ ಕಾದಂಬರಿಗಳಲ್ಲಿ ಕಾಣಸಿಗುತ್ತದೆ. ಇಲ್ಲಿ ಬಳಸಿರುವ ಭಾಷೆ ಅತ್ಯಂತ ನವಿರಾದುದು, ಮೋಹಕವಾದುದು. ಕಾದಂಬರಿಯ ವಸ್ತುವಿಗೆ ತಕ್ಕಂತಹ ಭಾಷೆ ಅದು. ಆ ಮೂಲಕ ಕಾದಂಬರಿಗಳ ವಾಚಕರಿಗೆ ಯಾವುದೇ ಅಡೆತಡೆಯಿಲ್ಲದೆ ತಮ್ಮ ವಾಚನವು ಸರಾಗವಾಗಿ ನಡೆದುಕೊಂಡು ಹೋಗುವಂತೆ ತ.ರಾ.ಸು ಕಾದಂಬರಿಗಳು ಅನುವು ಮಾಡುತ್ತವೆ.

# ಸಮಾರೋಪ

ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು ಅತ್ಯಂತ ವೈಶಿಷ್ಟ್ಯಪೂರ್ಣವಾದ ಕಾದಂಬರಿಗಳಾಗಿವೆ. ಭಾರತೀಯ ಮಧ್ಯಮ ವರ್ಗದ ಹಲವು ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರಮುಖ ವಿಷಯಗಳಾಗಿ ಮಾಡಿ ವಿವಿಧ ಮಜಲುಗಳಲ್ಲಿ ಹಲವು ಪಾತ್ರಗಳ ಮೂಲಕ ವಾಚಕರಿಗೆ ಅತ್ಯುತ್ತಮ ಕಾದಂಬರಿಗಳನ್ನು ರಚನೆ ಮಾಡಿದ್ದಾರೆ. ಸಾಮಾಜಿಕ ಸಮಸ್ಯೆಗಳನ್ನೆ ಮೂಲವಾಗಿಟ್ಟುಕೊಂಡು ಅತ್ಯಂತ ಪ್ರಭಾವಶಾಲಿಯಾಗಿ ಚಿತ್ರಿಸಿರುವ ಐವತ್ತಕ್ಕಿಂತ ಹೆಚ್ಚು ಸಾಮಾಜಿಕ ಕಾದಂಬರಿಗಳನ್ನು ತ.ರಾ.ಸು. ರಚಿಸಿದ್ದಾರೆ. ಚಂದವಳ್ಳಿಯ ತೋಟ, ಸಾಲದ ಮಗು, ಮಸಣದ ಹೂವು, ಹೆಣ್ಣು ಕಟ್ಟಿದ ಮನೆ, ಪಂಜರದ ಪಕ್ಷಿ, ಚಂದನದ ಗೊಂಬೆ ಮುಂತಾದ ಅತ್ಯದ್ಭುತವಾದ ಸಾಮಾಜಿಕ ಕಾದಂಬರಿಗಳನ್ನು ರಚಿಸಿದ್ದಾರೆ.

ತ.ರಾ.ಸು. ರವರ ಸಾಮಾಜಿಕ ಕಾದಂಬರಿಗಳಲ್ಲಿ ಸೃಷ್ಟಿಸಿರುವ ಪುರುಷಪಾತ್ರಗಳು ಅಹಂಕಾರ ಧೋರಣೆ ಹೆಣ್ಣನ್ನು ಕೀಳಾಗಿ ನೋಡುವುದು, ಕುಟುಂಬದಲ್ಲಿ ನನ್ನ ನಿರ್ಧಾರವೇ ಅಂತಿಮವಾಗಬೇಕೆಂಬ ಹಂಬಲ ಮುಂತಾದ ಗುಣಗಳ ಜೊತೆಗೆ ಕೆಲವು ಕಡೆ ಮಾನವೀಯ ಮೌಲ್ಯಗಳನ್ನು ಬಿತ್ತರಿಸುವ ಪಾತ್ರಗಳು ಕಾಣ ಸಿಗುತ್ತವೆ. ಸ್ತ್ರೀ ಪಾತ್ರಗಳನ್ನು ಅಭ್ಯಸಿಸಿದಾಗ ಅವರ ಜೀವನದ ರೀತಿ-ನೀತಿ, ಸುಖ-ದುಃಖ ಹಾಗೂ ಅವರ ಎದುರಿಸಿದ ಬಿಕ್ಕಟ್ಟುಗಳೆಲ್ಲದರ ಪರಿಚಯವಾಗುತ್ತದೆ. ಈ ಮಹಿಳೆಯರು ಜೀವನದ ಒಂದೊಂದು ಮೌಲ್ಯವನ್ನು ಪ್ರತಿಪಾದಿಸುವ, ಹೋರಾಟಗಾರ್ತಿಯಾಗಿ, ಕೆಲವೊಮ್ಮೆ ಪರಿಸ್ಥಿತಿಯ ಸುಳಿಗೆ ಸಿಲುಕಿ ಇರುವ ವಿಷಯವನ್ನು ಒಪ್ಪಿಕೊಳ್ಳುವ ನಿಸ್ಸಹಾಯಕರಾಗಿಯು ಕಂಡು ಬರುತ್ತಾರೆ. ಸಮಾಜವು ಎಂದು ಸೃಷ್ಟಿಯಾಯಿತೋ ಅಂದಿನಿಂದಲೇ ತನ್ನದೇ ಆದ ಸಮಸ್ಯೆಗಳನ್ನು ತನ್ನ ಒಡಲಲ್ಲಿ ಕಟ್ಟಿಕೊಂಡು ಸಾಗಿ ಬರುತ್ತಿದೆ. ಅದರಲ್ಲೂ ಮಧ್ಯಮ ವರ್ಗದ ಪ್ರಮುಖ ಸಮಸ್ಯೆಗಳಾದ ಬಡತನ, ಹಸಿವು, ನಿರುದ್ಯೋಗ, ಲಿಂಗ ತಾರತಮ್ಯ, ವರ್ಗ ತಾರತಮ್ಯ, ಜಾತಿ ಪದ್ಧತಿ ಮುಂತಾದ ಸಮಸ್ಯೆಗಳ ನಡುವೆ ಸಮಾಜವು ತೊಳಲುತ್ತಾ ಸಾಗಿರುವುದರಿಂದ ಸಾಮಾಜಿಕ ಕಾದಂಬರಿಗಳಲ್ಲಿ ಒಂದಲ್ಲ ಒಂದು ರೀತಿಯಾಗಿ ಈ ಸಮಸ್ಯೆಗಳ ಅನಾವರಣಯಾಗಿರುತ್ತದೆ.

'ಪಂಜರದ ಪಕ್ಷಿ' ಕಾದಂಬರಿಯಲ್ಲಿ ಒಂದು ಮಧ್ಯಮ ವರ್ಗದ ಹೆಣ್ಣು ತಾನು ಎಲ್ಲರಂತೆ ಬದುಕು ನಡೆಸಬೇಕೆಂಬ ಹಂಬಲವಿದೆ. ತನಗೂ ಮದುವೆ, ಗಂಡ, ಮಕ್ಕಳು ಎಂಬ ಸಂಬಂಧಗಳ ಜೊತೆ ಬದುಕಿನ ರಸ ಘಳಿಗೆಗಳನ್ನು ಕಳೆಯಬೇಕೆಂಬ ಸಾವಿರ ಕನಸುಗಳನ್ನು ಹೊತ್ತು ತನ್ನ ಬದುಕಿನಲ್ಲಿನ ಒಂದೊಂದು ದಿನಗಳನ್ನು ಎಣಿಸುತ್ತಾ ಆ ಕನಸುಗಳೆಲ್ಲಾ ನನಸಾಗಬಹುದೆಂಬ ಅದಮ್ಯ ಬಯಕೆಯಲ್ಲಿ ಬದುಕನ್ನು ದೂಡುತ್ತಾ ಇದ್ದಾಳೆ. ಅದಕ್ಕೆ ತನ್ನ ಅಣ್ಣ ಗೋಪಾಲಕೃಷ್ಣನ ಸ್ಫೂರ್ತಿ ತುಂಬಿದ ಮಾತುಗಳು, ಮದುವೆಯ ಬಗೆಗೆ ತನ್ನನ್ನು ರೇಗಿಸುತ್ತಿದುದು, ತಾನು ನಾಚಿ ನೀರಂತಾಗಿ ಕಾಲಿನಿಂದಲೇ ನೆಲದ ಮೇಲೆ ರಂಗೋಲಿ

ಬಿಡಿಸುತ್ತಿದುದು ಎಲ್ಲವೂ ಕೋಮಲಾ ಬದುಕಿನಲ್ಲಿ ಕೊನೆಗೂ ಕನಸಾಗಿಯೇ ಉಳಿದವು. ದಿಢೀರನೇ ತನ್ನ ಅಣ್ಣ ಮರಣ ಹೊಂದಿ ಇಡೀ ಬದುಕಿನ ನೊಗವ ತನ್ನ ಹೆಗಲ ಮೇಲೆ ಬೀಳುತ್ತದೆಂದು ಆಕೆ ಊಹಿಸಿರಲಿಲ್ಲ. ಆದರೆ ಬದಲಾದ ಸಂದರ್ಭದಲ್ಲಿ ತಾನು ಮನೆಯ ಜವಾಬ್ದಾರಿ ಹೊತ್ತು ಇಡೀ ಕುಟುಂಬವನ್ನೇ ಸಾಕಬೇಕಾದ ಪರಿಸ್ಥಿತಿ ತನಗೆ ಬಂದಾಗ ಒಬ್ಬ ದಿಟ್ಟ ಹೆಣ್ಣಾಗಿ ತನ್ನ ಆಸೆ-ಆಕಾಂಕ್ಷೆಗಳನ್ನೆಲ್ಲಾ ತನ್ನಲ್ಲೆ ಅದುಮಿಟ್ಟುಕೊಂಡು ತನ್ನ ಆಸೆಗಿಂತ ತನ್ನ ಕುಟುಂಬವೇ ಮುಖ್ಯ ಎಂದು ಕೋಮಲಾಳು ನಿರ್ಧರಿಸುವಾಗ ಹೆಣ್ಣು ಎಷ್ಟು ಸಬಲೆ ಎಂದು ಗೋಚರವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡಿಗೆ ಸರಿಸಮನಾಗಿ ಹೆಣ್ಣು ಯಾವುದರಲ್ಲೂ ಕಮ್ಮಿಯಿಲ್ಲ. ಮಾನಸಿಕ, ದೈಹಿಕ, ಬೌದ್ಧಿಕವಾಗಿ ಗಂಡಿನಷ್ಟೇ ಸಮಾನವಾದ ಶಕ್ತಿ ಸಾಮರ್ಥ್ಯ ಇದೆ ಎಂದು ಕೋಮಲಾ ಪಾತ್ರದ ಮೂಲಕ ತ.ರಾ.ಸು.ರವರು ಲಿಂಗ ತಾರತಮ್ಯದ ವಿರುದ್ಧ ಸಮರಸಾರಿ ಪುರುಷನಷ್ಟೇ ಸ್ತ್ರೀಗೂ ಸಮೂಹದಲ್ಲಿ ಸಮಾನವಾದ ಹಕ್ಕಿದೆ ಎಂದು ತೋರಿಸಿಕೊಟ್ಟಿದ್ದಾರೆ.

'ಹೆಣ್ಣು ಕಟ್ಟಿದ ಮನೆ' ಕಾದಂಬರಿಯ ಮೂಲಕ ಸಾಮಾಜಿಕವಾಗಿ ತನ್ನ ಕುಟುಂಬವನ್ನು ಎಲ್ಲರ ಹಾಗೆ ಉನ್ನತೀಕರಿಸಬೇಕೆಂಬ ನರಸಮ್ಮನ ಜೀವನ ಹಂತ-ಹಂತವಾಗಿ ಬದುಕಿನ ಸವಾಲುಗಳನ್ನು ಮೆಟ್ಟಿ ನಿಂತು, ಒಂದು ಇಡೀ ಕುಟುಂಬವನ್ನು ಒಬ್ಬ ಹೆಣ್ಣೇ ಗಂಡಿನಂತೆ ನಿರ್ವಹಿಸುವ ಕಥೆಯನ್ನು ಹೇಳಿದ್ದಾರೆ. ತನ್ನ ಗಂಡನು ವ್ಯವಹಾರ ಜ್ಞಾನದಲ್ಲಿ ಶೂನ್ಯ ಎಂದು ತಿಳಿದ ಮೇಲೆ ಪಕ್ಕಾ ಲೆಕ್ಕಾಚಾರದ ಮೂಲಕ ಸಂಸಾರವನ್ನು ನಿಭಾಯಿಸುವ ಚಿತ್ರಣ ಈ ಕಾದಂಬರಿಯಲ್ಲಿದೆ. ತ.ರಾ.ಸು. ರವರು ಇಲ್ಲೆ, ತುಂಬಾ ವಿಭಿನ್ನವಾಗಿ ನಿಲ್ಲುವುದು. ನರಸಮ್ಮ ತನ್ನ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ತನ್ನ ಕುಟುಂಬದ ಉನ್ನತಿಗೆ ಶ್ರಮಿಸುವುದು ಶ್ಲಾಘನೀಯ ವಿಚಾರ. ಒಂದೊಂದೆ ಪೈಸೆಯನ್ನು ಉಳಿಸಿ ಪುಟ್ಟ ಗಂಟುಗಳಾಗಿ ಮಾಡಿ ಕುಟುಂಬದ ಎಲ್ಲರಿಗೂ ಅದು ಯಾವ ರೂಪದಲ್ಲಿ ಉಪಯೋಗವಾಗುತ್ತದೆ ಎಂದು ಯೋಚಿಸಿ ಆ ಮೂಲಕ ಆ ಹಣವನ್ನು ತನ್ನ ಕುಟುಂಬದ ಅಭಿವೃದ್ಧಿಗೆ ಉಪಯೋಗಿಸುವಳು. ಹೆಣ್ಣು ತ್ಯಾಗಮಯಿ. ತನ್ನ ಆಸೆಗಳನ್ನು ಬದಿಗೊತ್ತಿ ಒಳ್ಳೆಯ ಸೀರೆ, ಒಡವೆಯನ್ನು ತೊಟ್ಟುಕೊಳ್ಳುವ ಕಾಲದಲ್ಲಿ ಮುಂದಿನ ತಲೆಮಾರು ಚೆನ್ನಾಗಿರಬೇಕೆಂದು ಯೋಚಿಸಿ ತನ್ನ ಮಗ-ಸೊಸೆಯಂದಿರ ಸುಖದಲ್ಲಿ ತನ್ನ ಸುಖವನ್ನು ಕಾಣಲು ಬಯಸುತ್ತಾಳೆ. ಆದರೆ 'ಹೆಣ್ಣು ಕಟ್ಟಿದ ಮನೆ'ಯು ಹೆಣ್ಣಿನಿಂದಲೇ ಹೇಗೆ ಹಾಳಾಗಬಹುದೆಂದು ಸೂಕ್ಷ್ಮವಾಗಿ, ಅಷ್ಟೇ ಅದ್ಭುತವಾಗಿ ವೆಂಕಮ್ಮನ ಪಾತ್ರದ ಮೂಲಕ ಮನೆಯ ಒಡತಿಯ ಗುಣಗಳು ಆಕೆಯಲ್ಲಿ ಎಳ್ಳಷ್ಟು ಕಾಣುವುದಿಲ್ಲ ಎಂದು ಅರ್ಥಗರ್ಭಿತವಾಗಿ ತೋರಿಸುತ್ತಾರೆ.

'ಚಂದನದ ಗೊಂಬೆ' ಕಾದಂಬರಿಯ ಮೂಲಕ ತ.ರಾ.ಸು. ಅವರು ಒಂದು ಹೆಣ್ಣು ಪರಿಸ್ಥಿತಿಗಳ ಸರಮಾಲೆಗೆ ಸಿಲುಕಿ, ತನ್ನದಲ್ಲದ ತಪ್ಪಿಗೆ ಎಷ್ಟೊಂದು ಕಷ್ಟಗಳನ್ನು ತನ್ನ ಬದುಕಿನಲ್ಲಿ ನಿರಂತರವಾಗಿ ಅನುಭವಿಸುತ್ತಾಳೆ ಎಂದು ತೋರಿಸಿದ್ದಾರೆ. ತಾನು ಕಾಲಚಕ್ರದ ಅಡಿಯಲ್ಲಿ ಸಿಲುಕಿ ಸಮಾಜದಲ್ಲಿನ ಕೊಂಕುಮಾತಿಗೆ ಮರು ಮಾತಾಡದೇ ಬದುಕಿನ ಬಂಡಿಯಲ್ಲಿ ನೂರಾರು ಕಷ್ಟಗಳ ಮೂಟೆ ಹೊತ್ತು

ಸಾಗುತ್ತಿರುವವಳ ಬದುಕು ಸಾಮಾಜಿಕ ಸಂರಚನೆಯ ಸಂದರ್ಭದಲ್ಲಿ ಈ ಕಾದಂಬರಿಯು ವಿಶೇಷವಾಗಿ ಬೆಸೆದುಕೊಂಡಿದೆ. ಒಬ್ಬ ವಿಧವೆ ಎಲ್ಲರನ್ನೂ ನಂಬಿ, ಎಲ್ಲರಲ್ಲೂ ಸೋದರ ಭಾವನೆಗಳನ್ನು ಕಾಣುತ್ತಾ ಸಾಗಿದಾಗ ಮಡಿವಂತಿಕೆಯ ಸಮಾಜವು ಆಕೆಗೆ ಬೇರೆಯದೇ ಪಟ್ಟ ಕಟ್ಟಿ ಜೀವನವೆಂಬ ದೋಣಿಯನ್ನು ಮಗುಚಿ ಕೆಡವಲು ಪ್ರಯತ್ನಿಸುತ್ತದೆ. ಆದರೆ ಒಬ್ಬ ದಿಟ್ಟ ಹೆಣ್ಣು ತಾನು ಪವಿತ್ರಳಾಗಿದ್ದರೆ ಯಾವುದಕ್ಕೂ ಹೆದರದೇ, ಬಂದ ಕಷ್ಟಗಳನ್ನು ದಿಟ್ಟವಾಗಿ ಎದುರಿಸುತ್ತಾ ಸಾಗುತ್ತಾಳೆ ಎಂಬುದನ್ನು ರತ್ನಮ್ಮ ಪಾತ್ರದ ಮೂಲಕ ತ.ರಾ.ಸು. ತಾನೊಬ್ಬ ಅದ್ಭುತ ಪಾತ್ರ ಸೃಷ್ಟಿಕಾರ ಎಂಬುದನ್ನು ತೋರಿಸಿದ್ದಾರೆ.

'ಮಸಣದ ಹೂವು' ಕಾದಂಬರಿಯ ಮೂಲಕ ವೇಶ್ಯಾವಾಟಿಕೆಯ ಕರಾಳದಂಧೆಯನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಅದೊಂದು ದಂಧೆಯಾದರೂ ಅಲ್ಲಿ ಇರುವ ಒಬ್ಬೊಬ್ಬ ವೇಶ್ಯೆಯ ಹಿಂದೆಯೂ ತನ್ನ ಬದುಕಿನ ಕರಾಳ ಮುಖವು ಅಡಗಿರುತ್ತದೆ. ಬದುಕನ್ನು ದೂಡಲೋ, ಬಡತನವೋ, ನಿರುದ್ಯೋಗವೋ, ಕುಟುಂಬವನ್ನು ಸಾಕಲೋ, ಹಣದ ಆಸೆಗೋ ಮುಂತಾದ ಹಲವು ಕಾರಣಗಳಿಗಾಗಿ ಆ ಹೆಣ್ಣು ಮಕ್ಕಳು ಇಲ್ಲಿ ಸಿಲುಕಿಕೊಂಡಿದ್ದಾರೆ. ವೇಶ್ಯಾವಾಟಿಕೆಯು ಜೈಲಿದ್ದ ಹಾಗೆ. ಒಮ್ಮೆ ಒಳಗೆ ಹೋದರೆ ಮತ್ತೆ ಹೊರಬರಲು ಬಹಳ ಕಷ್ಟ. ಅಲ್ಲಿರುವ ಒಂದೊಂದು ಹೆಣ್ಣಿನ ಹಿಂದೆಯೂ ಹಲವು ಕಣ್ಣೀರ ಕಥೆಗಳು ಅಡಕವಾಗಿರುತ್ತದೆ. ಮಡಿವಂತಿಕೆಯ ಸಮಾಜಕ್ಕೆ ಸೆಡ್ಡು ಹೊಡೆದ ಹಾಗೆ ತ.ರಾ.ಸು. ಅವರು ಇದನ್ನು ಒಂದು ಮುಖ್ಯ ಕಥಾವಸ್ತುವಾಗಿ ಆಯ್ಕೆ ಮಾಡಿ ಇಡೀ ಕಾದಂಬರಿ ಲೋಕವೇ ಒಮ್ಮೆ ಬೆರಗುಗಣ್ಣಿನಂತೆ ನೋಡುವಂತೆ ಮಾಡಿದ್ದಾರೆ.

ತ.ರಾ.ಸು. ರವರು ತಮ್ಮ ಸಾಮಾಜಿಕ ಕಾದಂಬರಿಗಳನ್ನು ಒಂದು ಸಾಮಾಜಿಕ ಬದ್ಧತೆಯನ್ನು ಇಟ್ಟುಕೊಂಡು ಅಂದಿನ ಕಾಲಘಟ್ಟದಲ್ಲಿದ್ದ ಹಲವು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯವನ್ನು ಮಾಡಿದರು. ತಮ್ಮ ಬರವಣಿಗೆಯಲ್ಲಿ ಒಂದು ಬಿಗಿ ಬಂಧವನ್ನಿಟ್ಟು ಹಲವು ಸೂಕ್ಷ್ಮತೆಗಳನ್ನು ಒಳಗೊಂಡ ಕಾದಂಬರಿಗಳನ್ನು ರಚಿಸುತ್ತಿದ್ದರು. ಸಾಮಾಜಿಕ ಬದ್ಧತೆಯಿಂದ ಒಂದು ಕೃತಿಯನ್ನು ಒಬ್ಬ ಲೇಖಕನು ರಚಿಸಿದಾಗ ಅದು ವಾಚಕರಲ್ಲಿ ಆಲೋಚಿಸುವ ಗುಣವನ್ನು ಬೆಳೆಸುತ್ತದೆ. ಅದನ್ನು ತಮ್ಮ ಹಲವು ಕಾದಂಬರಿಗಳಲ್ಲಿ ತೋರಿಸಿದ್ದಾರೆ. ಆ ಮೂಲಕ ಓದುಗರಲ್ಲಿ ಸಾಮಾಜಿಕ ಜಾಗೃತಿಯನ್ನು ಉಂಟುಮಾಡುತ್ತಿದ್ದರು. ತ.ರಾ.ಸು. ಅವರ ಬರವಣಿಗೆಯು ಓದುಗರ ಮನವನ್ನು ನಾಟುತ್ತಿತ್ತು.

ತ.ರಾ.ಸು. ಅವರ ಕಾದಂಬರಿಗಳಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಎಷ್ಟು ಚೆನ್ನಾಗಿ ಚಿತ್ರಿಸಿದ್ದಾರೋ ಅದೇ ರೀತಿ ಹೆಣ್ಣಿನ ಅಂತರ್ಯ, ದಾಂಪತ್ಯ ಜೀವನ, ಭ್ರಾತೃತ್ವ, ಮಾತೃಪ್ರೇಮ ಮುಂತಾದ ಹಲವು ವಿಷಯಗಳ ಮೇಲೆ ಅವರ ಬರವಣಿಗೆಯಲ್ಲಿ ಕಂಡು ಬರುವ ತೀವ್ರತೆಯನ್ನು ಕಂಡರೆ ಕಾದಂಬರಿಗಳನ್ನು ಯಾರು ಓದುತ್ತಾರೆ ಎಂದು ಮೂಗು ಮುರಿಯುವವರಿಗೆ ತಕ್ಕ ಉತ್ತರವನ್ನು ಕೊಟ್ಟಿದ್ದಾರೆ. ಇದಕ್ಕೆಲ್ಲಾ ಮುಖ್ಯ ಕಾರಣ ತ.ರಾ.ಸು. ಅವರ ಕಾದಂಬರಿಗಳಲ್ಲಿ ಕಂಡು ಬರುತ್ತಿದ್ದ ಬಿಗಿ ಚೌಕಟ್ಟೆ ಆಗಿದೆ.

ಕನ್ನಡದ ಹಿರಿಯ ಲೇಖಕರಾದ ತ.ರಾ.ಸು. ಹರಗಿ ಹಸನು ಮಾಡಿರುವ ಈ ಕಾದಂಬರಿ ಕ್ಷೇತ್ರದಲ್ಲಿ ಕಿರಿಯ ಲೇಖಕ-ಲೇಖಕಿಯರು ಹೊಸ ಪೀಳಿಗೆಗೆ ರುಚಿಸುವ ಕಾದಂಬರಿಗಳನ್ನು ರೂಪಿಸಬೇಕಿದೆ. ಓದುವ ಗೀಳು, ಅಭಿರುಚಿಯೇ ಕಡಿಮೆಯಾಗುತ್ತಿರುವ ಈ ಕಾಲಘಟ್ಟದಲ್ಲಿ ನಮ್ಮ ಹಿರಿಯರು ಕಾದಂಬರಿ ಲೋಕದಲ್ಲಿ ಮಾಡಿರುವ ಸಾಹಿತ್ಯ ಕೃಷಿಯನ್ನು ಈಗಿನ ವಾಚಕರಿಗೆ ತಿಳಿಸಬೇಕಾದ ಅನಿವಾರ್ಯತೆ ಇದೆ. ಲೇಖನ ಹರಿತ ನಾಲಿಗೆ ಚುರುಕು. ಅವರು ನಿರರ್ಗಳವಾಗಿ, ಸ್ವಾರಸ್ಯವಾಗಿ ಎಷ್ಟು ಗಂಟೆ ಬೇಕಾದರೂ ನಿರಾಯಾಸವಾಗಿ ಭಾಷಣ ಮಾಡಬಲ್ಲರು. ತ.ರಾ.ಸು. ಅವರಂಥ ಹಿರಿಯ ಚೇತನಗಳ ಸ್ಫೂರ್ತಿ, ಪ್ರೇರಣೆಗಳು ಕಿರಿಯ ಲೇಖಕರಿಗೆ ಅಗತ್ಯವಾಗಿ ಬೇಕಿದೆ. ಅವರ ಶೈಲಿ, ಸ್ವಯಂ ಸ್ಫೂರ್ತಿಯಿಂದ ಚಿಮ್ಮುವ ಚಿಲುಮೆ, ಅವರ ಶೈಲಿಯಲ್ಲಿ ಕಂಡು ಬರುವ ಶಕ್ತಿ ಹಾಗೂ ತೇಜಸ್ಸನ್ನು ಸಹೃದಯರು ಗುರುತಿಸಬಹುದು. ಹೊಸಗನ್ನಡದ ಎಷ್ಟೋ ಲೇಖಕರಿಗೆ ತ.ರಾ.ಸು. ಒಂದು ಸ್ಫೂರ್ತಿ ಮತ್ತು ಶಕ್ತಿ. ಆದ್ದರಿಂದ ಮುಂದಿನ ಪೀಳಿಗೆಯ ಲೇಖಕರ ಮೇಲೆ ತ.ರಾ.ಸು. ಅವರ ಆಶೀರ್ವಾದವಿರಲಿ ಎಂದು ಬಯಸುತ್ತೇವೆ.

## ಆಕರ ಗ್ರಂಥಗಳು

1. ಪಂಜರದ ಪಕ್ಷಿ : ತ.ರಾ.ಸು., ಓಂ ಶಕ್ತಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು–2003
2. ಹೆಣ್ಣು ಕಟ್ಟಿದ ಮನೆ : ತ.ರಾ.ಸು., ಓಂ ಶಕ್ತಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು–2003
3. ಚಂದನದ ಗೊಂಬೆ : ತ.ರಾ.ಸು., ಹೇಮಂತ ಸಾಹಿತ್ಯ, ಕಾಟನ್‌ಪೇಟೆ, ಬೆಂಗಳೂರು– 2018
4. ಮಸಣದ ಹೂವು : ತ.ರಾ.ಸು., ಹೇಮಂತ ಸಾಹಿತ್ಯ, ಕಾಟನ್‌ಪೇಟೆ, ಬೆಂಗಳೂರು– 2014

# ಪರಾಮರ್ಶನ ಗ್ರಂಥಗಳು


1. ಜಿ. ಎಸ್. ಆಮೂರ, ಕನ್ನಡ ಕಾದಂಬರಿಗಳ ಬೆಳವಣಿಗೆ
2. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಮತ್ತು ಸಾಹಿತ್ಯ ದರ್ಶನ
3. ಶ. ಮಂ. ಕೃಷ್ಣರಾಯ, ತ.ರಾ.ಸು. ಬದುಕು–ಬರಹ, 2008.
4. ಹು. ರಾ. ಕೋಮಲಾವಲ್ಲಿ, ತ.ರಾ.ಸು ಅವರ ಸಾಮಾಜಿಕ ಕಾದಂಬರಿಗಳು, ಒಂದು ಅಧ್ಯಯನ, 2008
5. ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳೆ, 2013
6. ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀಯರ ಚಿತ್ರಣ; ಒಂದು ಅಧ್ಯಯನ, 2014.
7. ನಾ. ಪ್ರಭಾಕರ್, ತ.ರಾ.ಸು. ನವ ಕರ್ನಾಟಕ ಸಾಹಿತ್ಯ ಸಂಪದ, 2008.
8. ರಂ. ಶ್ರೀ. ಮುಗಳಿ, ಸಾಹಿತ್ಯೋಪಾಸನೆ.
9. ಎಂ. ಎಸ್. ಪಾಟೀಲ, ತ.ರಾ.ಸು. ಹಾಗೂ ಅವರ ಕಾದಂಬರಿಗಳು
10. ಶಂಕರ ಪಾಟೀಲ, ಕಾದಂಬರಿ ದರ್ಶನ.
11. ಶಾಂತಿನಾಥ ದೇಸಾಯಿ, ಕನ್ನಡ ಕಾದಂಬರಿ ನಡೆದು ಬಂದ ದಾರಿ, ಉಪನ್ಯಾಸ
12. ಎಲ್.ಎಸ್. ಶೇಷಗಿರಿರಾವ್, ಕನ್ನಡ ಸಾಹಿತ್ಯ ಚರಿತ್ರೆ.
13. ಎಲ್.ಎಸ್. ಶೇಷಗಿರಿರಾವ್, ಎಲ್.ಎಸ್. ಕಂಡ ತ.ರಾ.ಸು, 2011.
14. ಶ್ರೀನಿವಾಸ ಹಾವನೂರ, ಕನ್ನಡದ ಮೊದಲ ಕಾದಂಬರಿಗಳ ಚಾರಿತ್ರಿಕ ಹಿನ್ನೆಲೆ.